## —ಪ್ರಸ್ತಾವನೆ—

ವಿಶ್ವದ ಜಲಜಂತುಗಳಲ್ಲಿ ಶಂಖವೂ ಒಂದು ರೂಪದಲ್ಲಿ ಶಂಖವು ಕುರೂಪವಾಗಿದ್ದರೂ ಸರ್ವರಿಂದ ಪೂಜೆಗೊಳ್ಳುತ್ತಿದೆ, ಹಾಗೂ ಮಾನ್ಯತೆ ಪಡೆದಿದೆ. ಹಿಂದುಗಳು ದೇವತಾಪೂಜೆಯಲ್ಲಿ ಶಂಖವನ್ನು ಉಪಯೋಗಿಸುತ್ತಾರೆ. ಶಂಖ ಧ್ವನಿಯು ವಿಜಯ, ಸುಖ ಸಮೃದ್ಧಿಯ ಹಾಗೂ ಯಶಪ್ರಭಾವದ ಶುಭಚಿಹ್ನೆಯಾಗಿದೆ. ಧಾರ್ಮಿಕ ಕಾರ್ಯಗಳಲ್ಲಿ ಉತ್ಸವ ಸಮಯದಲ್ಲಿ ಹೋಮ, ಹವನಗಳಲ್ಲಿ, ಯುದ್ಧಾರಂಭದಲ್ಲಿ ಶಂಖಧ್ವನಿಯನ್ನು ಮಾಡುತ್ತಾರೆ. ದೇವಾಧಿದೇವತೆಗಳ ಹಸ್ತಗಳೂ ಸಹ ಶಂಖಯುಕ್ತವಾಗಿವೆ. ಶಂಖಗಳಲ್ಲಿ ಬಲಮುರಿ ಶಂಖ, ಎಡಮುರಿಶಂಖ ಹೀಗೆ ಎರಡು ವಿಧವಾಗಿದ್ದು ಈಗ ಬಲಮುರಿ ಶಂಖದ ಬಗ್ಗೆ ಈ ಕಿರುಹೊತ್ತಿಗೆಯಲ್ಲಿ ಪರಿಚಯಿಸಲಾಗಿದೆ. ಅದರಂತೆ ಪೂಜ್ಯವಸ್ತುಗಳಾದ ಬಿಳಿಯ ಎಕ್ಕೆಯ ಗಣಪತಿ, ಸಾಲಿಗ್ರಾಮಗಳು ಹಾಗೂ ರುದ್ರಾಕ್ಷಿಗಳ ಬಗೆಗೂ ಸವಿಸ್ತಾರವಾಗಿ ವಿವರಿಸಿದೆ. ಆಸ್ತಿಕರಾದ ಮಿತ್ರರು ಈ ಪುಸ್ತಕದ ಸಹಾಯದಿಂದ ರುದ್ರಾಕ್ಷಿಗಳನ್ನು ಧರಿಸಿಕೊಂಡು ಬಲಮುರಿ ಶಂಖ, ಅರ್ಕಗಣಪತಿ, ಸಾಲಿಗ್ರಾಮಗಳನ್ನು ಪೂಜಿಸಿ ತಮ್ಮ ತಮ್ಮ ಇಷ್ಟಾರ್ಥಗಳನ್ನು ಪಡೆದು ಕೃತಾರ್ಥರಾಗಲಿ ಎಂಬ ಉದ್ದೇಶದಿಂದ ಈ ಪುಸ್ತಕವನ್ನು ಪ್ರಕಟಿಸಿದೆ. ಈ ಪುಸ್ತಕದ ಬಹುಭಾಗವು **ವಿದ್ಯಾವಾಚಸ್ಪತಿ ಶ್ರೀ ಸಿದ್ಧರಾಮ ಸ್ವಾಮಿಗಳು ಹುಬ್ಬಳ್ಳಿ** ಇವರಿಂದ ಬರೆಯಲ್ಪಟ್ಟಿದೆ. ಪ್ರಯುಕ್ತ ಅವರಿಗೆ ಚಿರಋಣಿ. ಸಹೃದಯರ ಸಲಹೆ-ಸೂಚನೆಗಳನ್ನು ಸ್ವೀಕರಿಸುವೆವು.

ಇತಿ ವಿದ್ವಜ್ಜನವಿಧೇಯ,

ಗದಗ

**ವೇ. ಬಸವಯ್ಯಶಾಸ್ತ್ರಿಗಳು ಹಿರೇಮಠ**

## ಅನುಕ್ರಮಣಿಕೆ

..............

# ಬಲಮುರಿ ಶಂಖಮಹಿಮಾ

## ಶಂಖಮಹತ್ವ

ಭಾರತೀಯ ಸಂಸ್ಕೃತಿ ಮತ್ತು ಧರ್ಮದಲ್ಲಿ ಶಂಖಮಹಿಮೆಗೆ ಬಹು ಮುಖವಾದ ಪ್ರಾಧಾನ್ಯತೆ ಕೊಡಲಾಗಿದೆ. ಭಗವಾನ್ ವಿಷ್ಣುವಿನ ನಾಲ್ಕು ಆಯುಧಗಳಲ್ಲಿ ಶಂಖವಿಗೂ ಒಂದು ಸ್ಥಾನವಿದೆ. ಮಠ ಮಂದಿರಗಳಲ್ಲಿ ಪೂಜಾ ಸಮಯದಲ್ಲಿ ಶಂಖ ಧ್ವನಿಯನ್ನು ಮಾಡುತ್ತಾರೆ. ತಾಂತ್ರಿಕ ಗ್ರಂಥಗಳಲ್ಲಿ ಉಲ್ಲೇಖಗೊಂಡ ಪ್ರಕಾರ ತಾಂತ್ರಿಕ ಪೂಜೆಗಳಲ್ಲಿ ಶಂಖದಿಂದ ಅಭಿಷೇಕ ಮಾಡುತ್ತಾರೆ. ಶ್ರೀಸೂಕ್ತ, ಲಕ್ಷ್ಮೀಸೂಕ್ತ, ಲಲಿತಾಸಹಸ್ರನಾಮ ಲಲಿತಾತ್ರಿಶತಿಗಳಲ್ಲಿ ಬಲಮುರಿ ಶಂಖದಿಂದ ಅಭಿಷೇಕಮಾಡುತ್ತಾರೆ. ಶ್ರೀದೇವಿ ಪೂಜೆಯಲ್ಲಿ ಶಂಖ ಧ್ವನಿಗೆ ಅಗ್ರಸ್ಥಾನವಿದೆ. ವಿವಾಹ ಮತ್ತು ಯುದ್ಧ ಕಾಲದಲ್ಲಿಯೂ ನೂತನ ಗೃಹಪ್ರವೇಶ ಸಮಯದಲ್ಲಿಯೂ, ಯಜ್ಞ ಸಮಾರಂಭಗಳಲ್ಲಿಯೂ. ನೂತನವಾಗಿ ಕಟ್ಟಲ್ಪಡುವ ನಗರಗಳ ಶಂಕುಸ್ಥಾಪನೆಯ ಸಮಯದಲ್ಲಿಯೂ ಶಂಖ ಧ್ವನಿಯನ್ನು ಮಾಡುತ್ತಾರೆ. ಈಧ್ವನಿಯನ್ನು ಪವಿತ್ರ ಮತ್ತು ಸರ್ವ ಶ್ರೇಷ್ಠವೆಂದು ಸಮಸ್ತ ಧರ್ಮದವರು ಒಪ್ಪಿರುತ್ತಾರೆ. ಶ್ರೀವೈಷ್ಣವ ಸಂಪ್ರದಾಯದಲ್ಲಿ ಶಂಖವನ್ನು ದಾಸರು ಪ್ರತಿದಿವಸ ಉಪಯೋಗಿಸುತ್ತಾರೆ ಅಥರ್ವಣವೇದದ ನಾಲ್ಕನೆಯ ಖಂಡದಲ್ಲಿ **"ಶಂಖ ಮಣಿ ಸೂಕ್ತ"** ಎಂಬುದು ಪ್ರಸಿದ್ಧವಿದೆ. ಈ ಸೂಕ್ತದ ಋಷಿ–ಶಂಖಮಣಿ ಇದ್ದರೂ ಈ ಸೂಕ್ತದಲ್ಲಿ ಏಳು ಮಂತ್ರಗಳಿರುವವು.

ಶಂಖವು ವಾಯುಮಂಡಲ, ಜ್ಯೋತಿ ಮಂಡಲ ಏವಂಸ್ವರ್ಣದಿಂದ ಉತ್ಪನ್ನವಾಗಿದೆ. ಶಂಖ ಧ್ವನಿಯು ಶತ್ರುಗಳ ಹೃದಯವನ್ನು ದುರ್ಬಲ ಗೊಳಿಸುತ್ತದೆ. ದುಷ್ಟಗ್ರಹ, ಭೂತ, ಪಿಶಾಚ ಬೇತಾಳ, ಶಾಕಿನಿ, ಢಾಕಿನಿ ಗಳೆಲ್ಲಾ ಶಕ್ತಿಯನ್ನು ನಿವಾರಿಸುತ್ತದೆ. ಈಧ್ವನಿಯು ರೋಗ, ಅಜ್ಞಾನ, ದಾರಿದ್ರ್ಯಗಳನ್ನು ದೂರಮಾಡುವದಲ್ಲದೆ ಶತ್ರುಗಳು ವಶವಾಗುವಂತೆ ಪ್ರೇರೇಪಿಸುತ್ತದೆ. ಹಾಗೂ ಈಧ್ವನಿಯು ಆಯುಷ್ಯ ವರ್ಧಕವಾಗಿದೆ.

ಶಂಖವು ಚಂದ್ರನ ಅಮೃತ ಮಂಡಲದಿಂದ ಉತ್ಪನ್ನವಾಗಿರುವದರಿಂದ ಮನೋಧೈರ್ಯವನ್ನೂ ಮನಸ್ಸಿಗೆತುಷ್ಟಿ, ಪುಷ್ಟಿಯನ್ನೂ ಕೊಡುವಂಥದಾಗಿದೆ. ಆದ್ದರಿಂದ ಈಶಂಖವನ್ನು ವೀರರು, ಹಾಗೂ ಪೂಜಕರು ಧಾರಣೆ ಮಾಡುತ್ತಾರೆ.

**ಶಂ** ಅಂದರೆ ಸುಖವನ್ನು **ಖ** ಅಂದರೆ ಉಂಟುಮಾಡುವಂಥದು ದೇವ, ಮಾನವ, ಕಿನ್ನರ, ಕಿಂಪುರುಷರಿಗೆ ಸುಖವನ್ನು ಉಂಟುಮಾಡು-ವಂಥದು ಆಗಿದೆ.

ಶಂಖಂ ಚಂದ್ರಾರ್ಕದೈವತ್ಯಂ ಮಧ್ಯೇವರುಣ ದೈವತವತ್ ।
ಪೃಷ್ಠೇ ಪ್ರಜಾಪತಿಂ ವಿದ್ಯಾಗ್ರೇ ಗಂಗಾ ಸರಸ್ವತೀವ್॥
ತ್ರೈಲೋಕ್ಯಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯಾ ।
ಶಂಖೇತಿಷ್ಠಂತಿ ವಿಪ್ರೇಂದ್ರ ತಸ್ಮಾತ್ ಶಂಖಂ ಪ್ರಪೂಜಯೇತ್॥
ದರ್ಶನೇನಹಿ ಶಂಖಸ್ಯ ಕಿಂಪುನಃ ಸ್ಪರ್ಶನೇನತು ।
ವಿಲಯಂ ಶಾಂತಿ ಪಾಪಾನಿ ಹಿಮವದ್ ಭಾಸ್ಕರೋದಯೇ ।

(ಈ ಶ್ಲೋಕಗಳು ಭೈರವಿ ತಂತ್ರದಲ್ಲಿ ಅವೆ)

ಶಂಖವು ಸೂರ್ಯ, ಚಂದ್ರರ ಸಮಾನ ದೇವತಾ ಸ್ವರೂಪವು, ಈ ಶಂಖದ ಮಧ್ಯದಲ್ಲಿ ವರುಣ ದೇವನೂ, ಪೃಷ್ಠಭಾಗದಲ್ಲಿ (ಹಿಂಭಾಗದಲ್ಲಿ) ಬ್ರಹ್ಮದೇವನೂ, ಅಗ್ರಭಾಗ (ತುದಿಯಲ್ಲಿ)ದಲ್ಲಿ ಗಂಗಾ ಸರಸ್ವತಿ ಮಾತೆಯರೂ ವಾಸವಾಗಿದ್ದಾರೆ. ಮೂರುಲೋಕಗಳಲ್ಲಿರುವ ಎಲ್ಲ ತೀರ್ಥಗಳು ಈ ಶಂಖದಲ್ಲಿ ಇರುವವು. ಶಂಖವನ್ನು ಪ್ರತಿದಿವಸ ಸ್ಪರ್ಶ ಮಾಡಬೇಕು (ಎರಡೂ ಹಸ್ತ-ಗಳಿಂದ ಮುಟ್ಟಬೇಕು) ಈ ಪ್ರಕಾರ ಸ್ಪರ್ಶಮಾಡುವದರಿಂದ ಸರ್ವಪಾಪಗಳು ನಾಶವಾಗುವವು. ಸೂರ್ಯನು ಉದಯವಾದ ತಕ್ಷಣ ಹಿಮದ ಗುಡ್ಡವು ಕರಗುವಂತೆ ಸರ್ವಕರ್ಮ (ಪಾಪ)ಗಳುನಿವಾರಣೆಯಾಗುವವು.

ದಕ್ಷಿಣಾವರ್ತ ಶಂಖೋಽಯಂ ಯಸ್ಯ ಸದ್ಮನಿ ತಿಷ್ಠತಿ ।
ಮಂಗಲಾನಿ ಪ್ರವರ್ತಂತೇ ತಸ್ಯ ಲಕ್ಷ್ಮೀಃಸ್ವಯಂ ಸ್ಥಿರಾ॥
ಕಾಂಚನೀ ಮೇಖಲಾಂ ಕೃತ್ವಾ ಶುಚಿಸ್ಥಾನೇ ನಿಧಾಪಯೇತ್ ।



ಶುಚಿಸ್ತಂ ಪೂಜಯೇತ್ ನಿತ್ಯಂ ಕುಸುಮೈ ಶ್ಚಂದನೈಸ್ತಥಾ ॥
ದುಗ್ಧೇನ ಸ್ಥಾಪನೀಯೋಽಯಂ ಸರ್ವಲಕ್ಷ್ಮೀ ಫಲ ಪ್ರದಃ ॥

ಬಲ ಮುರಿ ಶಂಖವು ಯಾರ ಮನೆಯಲ್ಲಿ ಇರುವದೋ ಅವರ ಮನೆಯಲ್ಲಿ ಸಕಲ ಸಂಪದವು ವೃದ್ಧಿಯಾಗುತ್ತದೆ. ಆ ಮನೆಯಲ್ಲಿ ಸರ್ವ ದೇವತೆಗಳು ವಾಸವಾಗಿರುತ್ತಾರೆ. ಅಲ್ಲಿಂದ ದಾರಿದ್ರ್ಯ ಲಕ್ಷ್ಮಿಯು ತೊಲಗುವಳಲ್ಲದೆ. ಭಾಗ್ಯಲಕ್ಷ್ಮಿಯುವಾಸಿಸುತ್ತಾಳೆ.

ಚಂದ್ರಾಗರು ಕರ್ಪೂರೈಃ ಪೂಜಯೇತ್ ಯೋ ಗೃಹೇವಹವ್ ।
ಸಸೌಭಾಗ್ಯಂ ಕೃಷ್ಣ ಸಮೋ ಧನೇ ಸ್ಯಾದ್ ಧನದೋಪಮಾಃ ॥

ಬಲಮುರಿ ಶಂಖಕ್ಕೆ ಬಂಗಾರದ ಕವಚವನ್ನು ಹಾಕಿಸಿ ಪವಿತ್ರ ಸ್ಥಳದಲ್ಲಿ ಇಟ್ಟು ಗಂಧ, (ಚಂದನ) ಕುಂಕುಮ, ಅಕ್ಷತೆ, ತುಳಸಿಪತ್ರಿ, ಪುಷ್ಪದಿಗಳಿಂದಲೂ, ಧೂಪ, ದೀಪ ಗಳಿಂದಲೂ ಪೂಜಿಸಿ ಆಕಳಹಾಲಿನಲ್ಲಿ ಇಡಬೇಕು, ಮತ್ತು ನೈವೇದ್ಯವನ್ನು ಸಮರ್ಪಿಸಿ ಆ ಪ್ರಸಾದವನ್ನು ಸ್ವೀಕರಿಸಬೇಕು. ಈ ಪ್ರಕಾರ ಪ್ರತಿನಿತ್ಯ ಮಾಡುವದರಿಂದ ಆಮನೆಯು ಸುಖ, ಸಂಪದ್ಭರಿತವಾಗುತ್ತದೆ. ಶಂಖವನ್ನು ಹಾಲಿನಲ್ಲಿ ಇಡುವದರಿಂದ ಅದಕ್ಕೆ ಒಂದು ಅಮೋಘವಾದ ಶಕ್ತಿ ಬರುತ್ತದೆ. ಮತ್ತು ಆ ಶಂಖವು ಫಲಕೊಡುತ್ತದೆ.

## ಶಂಖದ ಉತ್ಪತ್ತಿ

ಶಂಖದ ಉತ್ಪತ್ತಿಯ ವಿಚಾರವಾಗಿ ಬ್ರಹ್ಮವೈವರ್ತಕ ಪುರಾಣದ ಪ್ರಕೃತಿಖಾಂಡದ ಹದಿನೆಂಟನೆಯ ಅಧ್ಯಾಯದಲ್ಲಿ ಒಂದು ಕಥೆ ಇದೆ.-ಶಂಖ ಚೂಡ ಎಂಬ ರಾಕ್ಷಸನೊಡನೆ ಶಿವನು ಘೋರ ಯುದ್ಧವನ್ನು ಮಾಡಿದನು. ಆ ಯುದ್ಧದಲ್ಲಿ ಭಗವಾನ್ ಶಂಕರನು ತ್ರಿಶೂಲದಿಂದ ಶಂಖ ಚೂಡ ರಾಕ್ಷಸನನ್ನು ಸಂಹಾರಮಾಡಿದನು ನಂತರ ಅವನ ಅಸ್ಥಿಪಂಜರವನ್ನು ಸಮುದ್ರದಲ್ಲಿ ಹಾಕಿಸಿದನು. ಕೆಲವುಕಾಲದನಂತರ ಆ ಅಸ್ಥಿಗಳು ಶಂಖ ರೂಪತಾಳಿದವೆಂದು ತಿಳಿಸಲಾಗಿದೆ ಮತ್ತು ಪದ್ಮ ಪುರಾಣದ ಉತ್ತರ ಖಂಡದ ಹನ್ನೆರಡನೆಯ ಅಧ್ಯಾಯದಲ್ಲಿಯೂ ಸಹ ಶಂಖದ ವರ್ಣನೆಯುಬರುತ್ತದೆ. ಸಮುದ್ರ ಮಂಥನ ಸಮಯದಲ್ಲಿ ಹದಿನಾಲ್ಕು ರತ್ನಗಳು ಪ್ರಾಪ್ತವಾದವು ಅವುಗಳಲ್ಲಿ ಈ ಶಂಖವೂ ಸಹ ಒಂದು ಎಂಬುದಾಗಿ ತಿಳಿದಿರುವದರಿಂದ ಇದೊಂದು ಅನರ್ಘ್ಯ ರತ್ನವಾಗಿದೆ. ಭಾರತ ಭಾಷಾ ಶಾಸ್ತ್ರ ಕೋಶಕಾರರು

ಶಂಖವನ್ನು 'ನಿಧಿ'ಯೆಂದುಕರೆದಿದ್ದಾರೆ. ಆಯುರ್ವೇದ, ಜ್ಯೋತಿಷ್ಯ, ಹಸ್ತ ಸಾಮುದ್ರಿಕ ಶಾಸ್ತ್ರಕಾರರು ಈ ಶಂಖದ ವಿಷಯವಾಗಿ ಬಹುವಿಧವಾಗಿ ವರ್ಣಿಸಿದ್ದಾರೆ.

## ಶಂಖದ ಪ್ರಮುಖ ಭೇದಗಳು

ಶಂಖಗಳು ಪ್ರಾಮುಖ್ಯವಾಗಿ ಎರಡು ವಿಧವಾಗಿವೆ. ಒಂದು ಎಡಮುರಿ ಇನ್ನೊಂದು ಬಲಮುರಿ. ಇವುಗಳಲ್ಲಿ ದಕ್ಷಿಣಕ್ಕೆ (ಬಲಕ್ಕೆ) ಪರದೆತಿರುಗಿದ ಶಂಖುವಿಗೆ ಬಲ ಮುರಿ ಶಂಖ ಎಂದೂ, ವಾಮಭಾಗಕ್ಕೆ (ಎಡಕ್ಕೆ) ಪರದೆತಿರುಗಿದ ಶಂಖುವಿಗೆ ಎಡಮುರಿ ಶಂಖಎಂದೂ ಹೆಸರು. ಎಡ ಮುರಿಯ ಶಂಖಗಳು ಎಲ್ಲ ಕಡೆಗೆ ಸಿಗುತ್ತವೆ ಆದರೆ ಬಲ ಮುರಿಶಂಖಗಳು ಎಲ್ಲಕಡೆಗೆ ದೊರೆಯುವದಿಲ್ಲ ಮತ್ತು ಅವುಗಳ ಬೆಲೆಯೂ ಹೆಚ್ಚು ಇರುವದು.

ಬಲ ಮುರಿ ಶಂಖಗಳಲ್ಲಿಯೂ ಎರಡು ವಿಧ ಇರುವವು ಒಂದು ಬಲಮುರಿ ಪುರುಷಶಂಖ, ಇನ್ನೊಂದು ಬಲಮುರಿ ಸ್ತ್ರೀ ಶಂಖ. ದಪ್ಪಪದರು ಮತ್ತು ಹೆಚ್ಚು ಭಾರವಾಗಿರುವಂಥದು ಬಲ ಮುರಿ ಪುರುಷಶಂಖವು, ಮತ್ತು ತೆಳುವಾದ ಪದರು ಹಾಗೂ ಹೆಚ್ಚು ಭಾರವಿಲ್ಲದ್ದು ಬಲಮುರಿ ಸ್ತ್ರೀಶಂಖವು ಎಂದು ತಿಳಿದುಕೊಳ್ಳಬೇಕು ಬಹುಶಃ ಪ್ರತಿಯೊಬ್ಬರೂ ಶಂಖವನ್ನು ಪೂಜ್ಯಭಾವನೆಯಿಂದ ಉಪಯೋಗಿಸುತ್ತಾರೆ.

ಭಾರತೀಯ ಸಂಸ್ಕೃತಿಯಲ್ಲಿ ನಾಲ್ಕು ವರ್ಣಭೇದಗಳಿರುವಂತೆ ಶಂಖಗಳಲ್ಲಿಯೂ ಬ್ರಾಹ್ಮಣ ಸಂಜ್ಞಕ, ಕ್ಷತ್ರಿಯ ಸಂಜ್ಞಕ, ವೈಶ್ಯ ಸಂಜ್ಞಕ, ಶೂದ್ರ ಸಂಜ್ಞಕ ಎಂಬುದಾಗಿ ನಾಲ್ಕು ಜಾತಿಗಳಿರುವವು,

ದ್ವಿ ಜಾತಿಭೇದೇನಸ ಪುನಸ್ತು ಚತುರ್ವಿಧಃ ।
ಶ್ವೇತೋ ರಕ್ತಃ ಪೀತಕೃಷ್ಣೋ ಬ್ರಹ್ಮ ಕ್ಷತ್ರಾದಿ ವರ್ಣಜಾಃ ।।

೧ **ಬ್ರಾಹ್ಮಣ ಸಂಜ್ಞಕ ಶಂಖ**– ಈ ಶಂಖವು ಆಕಾರದಲ್ಲಿ ಚಿಕ್ಕದಾಗಿದ್ದು, ಅತೀವ ಬಿಳಿಯ ಬಣ್ಣ, ಕೋಮಲ, ಇದ್ದು ಬಹಳ ಹಗುರಾಗಿರುವದು,

೨ **ಕ್ಷತ್ರಿಯ ಸಂಜ್ಞಕ ಶಂಖ**– ಈ ಶಂಖವು ಕರ್ಕಶ ಧ್ವನಿ ಮತ್ತು ಗಟ್ಟಿ ಧ್ವನಿ, ಪ್ರತ್ಯೇಕವಾಗಿರುವ ವಿಭಕ್ತ ರೇಖೆಯುಳ್ಳದ್ದು ಮತ್ತು ಅಧಿಕ ಭಾರವಾಗಿರುವದು. ಹಾಗು ಕೆಂಪು ಬಣ್ಣ ಇರುವದು.



೩ **ವೈಶ್ಯ ಸಂಜ್ಞಕ ಶಂಖ**– ಈ ಶಂಖವು ಆಕಾರದಲ್ಲಿ ದೊಡ್ಡದು ಮತ್ತು ಸುಂದರವಾಗಿದ್ದು ಪ್ರತ್ಯೇಕ ಅಂಶವಾಗಿ ರೇಖಾ ರೂಪವಾಗಿರುವದು. ಹಳದಿಬಣ್ಣದ್ದಿರುವದು.

೪ **ಶೂದ್ರ ಸಂಜ್ಞಕ ಶಂಖ**– ಈ ಶಂಖವು ಅಂಕುಡೊಂಕಾಗಿದ್ದು- ಅದರ ಮೈತುಂಬ ಕಪ್ಪು ಚುಕ್ಕೆಗಳಿರುತ್ತವೆ. ಕಠೋರವಾಗಿದ್ದು, ವಿಚ್ಛಿದ್ರ ಕಾರಕವಾಗಿರುವದು. ಮತ್ತು ಎಲ್ಲ ಶಂಖಗಳಿಗಿಂತ ಹೆಚ್ಚು ಭಾರವಾಗಿರುವದು.

ಈ ರೀತಿಯಾಗಿ ಬೇರೆ, ಬೇರೆಗ್ರಂಥಗಳಲ್ಲಿ ದೇವತೆಗಳ ದೃಷ್ಟಿಗನು ಸಾರವಾಗಿ ಶಂಖಗಳ ಭೇದಗಳನ್ನು ತಿಳಿಸಲಾಗಿದೆ. ಇವಲ್ಲದೆ ಇನ್ನೂ ಕೆಲವುಬಗೆಯ ಶಂಖಗಳ ವರ್ಣನೆಯು ಹೀಗೆ ಇದೆ.

೧ **ಗಣೇಶ ಶಂಖ**– ಈ ಶಂಖದ ಒಳಗಡೆ ಹಾಗೂ ಹೊರ ಭಾಗದಲ್ಲಿ ಸಿಂಧೂರದಂತಹ ಬಣ್ಣ ವಿರುವದು ಹಿಂಭಾಗದ ಪೃಷ್ಠವು ಚಿಕ್ಕದಾಗಿರುವದು. ಈ ಶಂಖಗಳು ದೊರೆಯುವದು ಬಹುದುರ್ಲಭ. ಮತ್ತು ಈ ಶಂಖಗಳು ಬಹಳ ಮಹತ್ವವುಳ್ಳವುಗಳಾಗಿದ್ದು ಸಿದ್ಧಿ ಪ್ರದವೂ, ವೃದ್ಧಿಕರವೂ ಆಗಿ ಇವುಗಳಬೆಲೆಯೂ ಬಹಳ ಹೆಚ್ಚು. ಅತಿಕಡಿಮೆಯೆಂದರೆ ಒಂದು ಸಾವಿರದಿಂದ ಐದು ಸಾವಿರ ರೂಪಾಯಿಗಳವರೆಗೆ ಬೆಲೆಬಾಳುವವು.

೨. **ದೇವಿ ಶಂಖ**– ಈ ಶಂಖವು ಹಳದಿ ಅಥವಾ ಕೆಂಪುವರ್ಣದ್ದಾಗಿದ್ದು, ಅದರ ಮೈಮೇಲೆ ಸುಂದರವಾದ ರೇಖೆಗಳಿರುವವು. ಈ ಶಂಖದ ಮುಖವು ಕೋಮಲವಾಗಿದ್ದು ಬಹಳ ಆಕರ್ಷಕವಾಗಿರುವದು ಸಾಧಾರಣವಾಗಿ ಕಪ್ಪು ಬಣ್ಣದಿಂದ ಕೂಡಿದ್ದರೂ ತಾಮ್ರದ ವರ್ಣಮಿಶ್ರವಾಗಿರುವದು- ದೇವಿಶಂಖದ ಪೃಷ್ಠ ಭಾಗವು ಮೂವತ್ತು ಇಂಚು (ಅಂಗುಲ) ಉದ್ದವಾಗಿದ್ದು ಇದರ ಧ್ವನಿಯು ಶತ್ರುಗಳ ಹೃದಯವನ್ನು ಕಂಪಿಸುವಂಥದು. ಗ್ರಹ, ಭೂತ, ಪಿಶಾಚಾದಿ ಬಾಧೆಯೂ ಸಹ ಈ ಶಂಖದ ಧ್ವನಿಯಿಂದ ನಿವಾರಣೆಯಾಗುವದು.

೩. **ವಿಷ್ಣು ಶಂಖ**– ಈ ಶಂಖದ ಬಣ್ಣವು ಬಹಳ ಬಿಳಿಯದಾಗಿದ್ದು ಮುತ್ತಿನ ಅಂಶದಿಂದ ಕೂಡಿರುವದು. ಹಾಲಿನಂತೆ ಸ್ವಚ್ಛಬಿಳಿಯದಾಗಿದ್ದು ಅಧ್ಭುತ ಶಕ್ತಿಯುಳ್ಳದ್ದಾಗಿರುವದು. ದೇವಮಂದಿರಗಳಲ್ಲಿ ಪೂಜಾಸಮಯದಲ್ಲಿ

ಹಾಗೂ ಯುದ್ಧದ ಪ್ರಸಂಗದಲ್ಲಿ ಧ್ವನಿಮಾಡಲು ಇದುಬಹುಉತ್ತಮವಾದದ್ದು ವಿಷ್ಣು ಶಂಖವು ಬಲಮುರಿ ಯಾಗಿದ್ದರೆ ಬಹಳ ಉತ್ತಮವು, ಬಲಮುರಿ ಶಂಖಕ್ಕೆ ಪಾಂಚ ಜನ್ಯವೆಂದು ಕರೆಯುತ್ತಾರೆ ಇದು ಬಹು ಶ್ರೇಷ್ಠ ಶಂಖವು.

ಬಲ ಮುರಿ ವಿಷ್ಣು ಶಂಖದಲ್ಲಿ ಮೂರು ಗುಣಗಳಿರುವವು.

ವೃತ್ತತ್ವ ಸ್ನಿಗ್ಧತಾ ಸ್ವಚ್ಛತ್ವಂ ಶಂಖ ಸ್ಯೇತಿ ಗುಣತ್ರಯಮ್ ||

ಎಂಬಂತೆ ಗೋಲಾಕಾರ, ಸ್ನಿಗ್ಧತಾ, ಸ್ವಚ್ಛತಾ ಇವು ವಿಷ್ಣು ಶಂಖದ ವೈಶಿಷ್ಟ್ಯಗಳು. ಯಾವದೇಕಾರಣದಿಂದ ಅಥವಾ ಅಜಾಗರೂಕತೆಯಿಂದ, ಅಥವಾ ನಿರ್ಲಕ್ಷ್ಯದಿಂದ ಶಂಖವು ಕೆಳಗೆಬಿದ್ದು ಕ್ಷತ (ಒಡೆಯುವದು, ತುಂಡಾಗುವದು) ಆದರೆ ಅದಕ್ಕೆ ಬೆಳ್ಳಿ ಅಥವಾ ಬಂಗಾರದ ಕವಚವನ್ನು ಹಾಕಿಸಬೇಕು. ಅದರಿಂದ ಕ್ಷತಿಗೊಂಡ ದೋಷವು ನಿವಾರಣೆಯಾಗುವದು.

ಆವರ್ತ ಭಂಗದೋಷೋಹಿ ರಜತ ಹೇಮಯೋಗಾತ್ ವಿನಶ್ಯತಿ ||

ಈ ವಿಷ್ಣು ಶಂಖಗಳಲ್ಲಿಯೂ ಪುರುಷ ಶಂಖ, ಸ್ತ್ರೀಶಂಖಗಳೆಂದು ಎರಡು ವಿಧವಾಗಿರುವವು. ಹಾಲು, ಮೊಸರು, ತುಪ್ಪ ಅಥವಾ ಗೋದಿ ಹಿಟ್ಟಿನ ಹಾಗೆ ಬಿಳಿಯಬಣ್ಣದ ಶಂಖವು ಪುರುಷಶಂಖವು ಆಕಾಶದ ಬಣ್ಣದಂತೆ ಇದ್ದು. ಅದರ ಮೈಮೇಲೆ ನಾನಾರೇಖೆಗಳಿಂದಕೂಡಿದ್ದರೆ ಅದು ಸ್ತ್ರೀಶಂಖವು ಎಂದು ತಿಳಿಯಬೇಕು.

### ಶಂಖ ಪರೀಕ್ಷೆ

ಶಂಖಗಳಲ್ಲಿ ಅಸಲಿ (ನಿಜ) ಶಂಖ, ಕೃತಕ ಶಂಖ ಎಂಬುದನ್ನು ಪರೀಕ್ಷೆಮಾಡಬೇಕಾಗಿದ್ದರೆ. ಒಂದು ಪಾತ್ರೆಯಲ್ಲಿ ನೀರುತುಂಬಿ ಅದರಲ್ಲಿ ಉಪ್ಪು ಹಾಕಿ ಆ ನೀರಿನಲ್ಲಿ ಶಂಖವನ್ನು ಮುಳುಗಿಸಿ ಐದು ದಿವಸಗಳವರೆಗೆ ಇಡಬೇಕು. ಆಗ ಶಂಖವು ಕಪ್ಪು ಬಣ್ಣ ಹೊಂದಿದರೆ ಮತ್ತು ಅದು ಛಿದ್ರ, ಛಿದ್ರವಾದರೆ ಕೃತಕಶಂಖ ವೆಂದುತಿಳಿಯಬೇಕು, ಮತ್ತು ಕೃತಕ ಶಂಖವನ್ನು ಕಾಷ್ಟಿಕ ಸೋಡಾದಲ್ಲಿ ಹಾಕಿದರೆ ಒಡೆದು ತುಂಡಾಗುವದು ಉತ್ತಮ ಅಸಲಿ (ನಿಜ) ಬಲಮುರಿಶಂಖವು ಮನೆಯಲ್ಲಿದ್ದರೆ ಸುಖ, ಶಾಂತಿ, ಸಂಪದಭಿವೃದ್ಧಿ ಯಾಗುವದು.



ಶಂಖದ ಭಾರದ ಮೇಲಿಂದ ಉತ್ತಮ, ಮಧ್ಯಮ, ಕನಿಷ್ಠಗಳೆಂದು ಕಂಡು ಹಿಡಿಯುವರು ಶಂಖದ ಭಾರವು ಮೂರು ತೊಲೆಯಿಂದ ಹನ್ನೊಂದು ತೊಲೆ ತೂಕದವರೆಗೆ ಭಾರವಾಗಿರುವದು ಕನಿಷ್ಠ ತರಗತಿಯದು, ಹನ್ನೊಂದು ತೊಲೆಯಿಂದ ಇಪ್ಪತ್ತೈದುತೊಲೆ ತೂಕದಷ್ಟು ಭಾರವಾಗಿರುವದು ಮಧ್ಯಮ ತರಗತಿಯದು. ಇಪ್ಪತ್ತೈದು ತೊಲೆಯಿಂದ ಐವತ್ತೊಂದು ತೊಲೆ ತೂಕ ಭಾರವಾಗಿರುವದು ಬಹಳ ಉತ್ತಮ (ಶ್ರೇಷ್ಠ) ತರಗತಿಯದು ಎಂದು ತಿಳಿದು ಕೊಳ್ಳಬೇಕು ಶಂಖವನ್ನು ಕಿವಿಯ ಹತ್ತಿರ ಇಟ್ಟುಕೊಂಡರೆ ಓಂಕಾರ ಧ್ವನಿ ಬರುವದು. ಶಂಖಗಳು ಕನ್ಯಾಕುಮಾರಿ, ಧನುಷ್ಕೋಟಿ, ದ್ವಾರಕಾ ಮತ್ತು ಮಾತೃಪೀಡರಿಗಳಲ್ಲಿ ದೊರೆಯುತ್ತವೆ ಮತ್ತು ಸಿಲೋನ (ಶ್ರೀಲಂಕಾ)ದಲ್ಲಿಯೂಸಹ ಸಿಗುತ್ತವೆ

### ಬಲ ಮುರಿ ಶಂಖದ ಪೂಜಾ ವಿಚಾರ

ಬಲಮುರಿ ಶಂಖವನ್ನು ಶ್ರೀಗಂಧ. ಕುಂಕುಮ, ಅಕ್ಷತೆ, ತುಳಸಿ ಪತ್ರಿ ದಶಾಂಗ, ಧೂಪ, ಕರ್ಪೂರ ದೀಪ, ತುಪ್ಪದ ದೀಪಗಳಿಂದ ಪೂಜಿಸಿ ನೈವೇದ್ಯ ವನ್ನು ಸಮರ್ಪಿಸಿ ಈ ಮಂತ್ರವನ್ನು ಪ್ರತಿದಿವಸ ೧೦೮ ಸಾರೆ ಜಪಿಸಬೇಕು.

ಮಂತ್ರ–ಓಂ ಹ್ರೀಂ ಶ್ರೀಂ ಕ್ಲೀಂ ಬ್ಲೂಂಸುದಕ್ಷಿಣಾ ವರ್ತ ಶಂಖಾಯ ನಮಃ||

ಪೂಜಾ ಫಲ–ಬಲಮುರಿ ಶಂಖವನ್ನು ಹಗಲು ಪ್ರಥಮಯಾಮದಲ್ಲಿ ಪೂಜಿಸಿ ಈ ಮಂತ್ರವನ್ನು ೧೦೮ ಸಾರೆ ಜಪಿಸುವದರಿಂದ ರಾಜ ಮನ್ನಣೆಯು ದ್ವಿತೀಯ ಯಾಮದಲ್ಲಿ ಪೂಜಿಸಿ ಮಂತ್ರ ಜಪಿಸುವದರಿಂದ ಶ್ರೀವೃದ್ಧಿಯು (ಸಂಪತ್ತು) ತೃತೀಯ ಯಾಮದಲ್ಲಿ ಪೂಜಿಸಿ ಮಂತ್ರ ಜಪಮಾಡುವದರಿಂದ ಯಶಸ್ಸು. ಕೀರ್ತಿವೃದ್ಧಿಯು. ಚತುರ್ಥಯಾಮದಲ್ಲಿ ಪೂಜಿಸಿ ಮಂತ್ರ ಪಠಣಮಾಡುವದರಿಂದ ಸಂತಾನ ಪ್ರಾಪ್ತಿಯು.

೧ ಯಾಮ ಅಂದರೆ ೩ ತಾಸುಗಳು ಅಥವಾ ೧ ಪ್ರಹರ

## ಶಂಖ ಧ್ಯಾನ

**ಮಂತ್ರ** ಓಂ ಶ್ರೀಂ ಶ್ರೀಧರ ಕರಸ್ಥಾಯ ಪಯೋನಿಧಿ ಜಾತಾಯ ಲಕ್ಷ್ಮೀ ಸಹೋದರಾಯ ಚಿಂತಿತಾರ್ಥಪ್ರದಾಯ ಶ್ರೀದಕ್ಷಿಣಾವರ್ತ ಶಂಖಾಯ ಹ್ರೀಂ ಶ್ರೀಂ ಶ್ರೀಕರಾಯ ಪೂಜ್ಯಾಯ ನಮಃ||

ಬಲ ಮುರಿಶಂಖವನ್ನು ಪೂಜಿಸಿ ಈ ಮಂತ್ರವನ್ನು ಪ್ರತಿದಿವಸ ೧೦೮ ಸಾರೆ (೧ ತಿಂಗಳು) ೩೦ ದಿವಸ ಜಪಮಾಡಿದರೆ ಸರ್ವಾರ್ಥಸಿದ್ಧಿ ಯಾಗುವದು.

**ಮಂತ್ರ**-ಓಂ ಹ್ರೀಂ ಶ್ರೀಂ ಕ್ಲೀಂ ಬ್ಲೂಂ ದಕ್ಷಿಣಾವರ್ತ ಶಂಖಾಯ ನಮಃ||

ಬ್ರಾಹ್ಮೀ ಮುಹೂರ್ತದಲ್ಲಿ (ಬೆಳಿಗ್ಗೆ ೪|| ಗಂಟೆಗೆ) ಎದ್ದು ಸ್ನಾನ, ಪೂಜಾದಿ ತನ್ನ ನಿತ್ಯಕ್ರಿಯೆಗಳನ್ನು ಮುಗಿಸಿ ಪೂಜಾ ಸಲಕರಣೆಗಳನ್ನು ಶೆ ಖರಿಸಿಕೊಂಡು ಬಲಮುರಿಶಂಖವನ್ನು ಆಕಳ ಹಾಲಿನಿಂದ ಅಭಿಷೇಕಮಾಡಿ ಭಕ್ತಿಯಿಂದ ಶ್ರೀಗಂಧ ಕುಂಕುಮ, ಅಕ್ಷತೆ, ತುಳಸಿಪತ್ರಿ, ನಾನಾವಿಧವಾದ ಸುಗಂಧ ಪುಷ್ಪಗಳು, ಧೂಪ, ದೀಪ, ಕರ್ಪೂರ ದೀಪಗಳಿಂದ ಪೂಜಿಸಿ ನೈವೇದ್ಯವನ್ನು ಸಮರ್ಪಿಸಬೇಕು, ನಂತರ ಈ ಮೂಲ ಮಂತ್ರವನ್ನು ೧೦೮ ಸಾರೆ ಜಪಮಾಡಿದರೆ ರಾಜವಶ್ಯ, ರಾಜಸನ್ಮಾನಗಳು ಪ್ರಾಪ್ತವಾಗುತ್ತವೆ.

ಬಲಮುರಿ ಶಂಖವನ್ನು ಒಂದೇಬಣ್ಣದ ಆಕಳಹಾಲಿನಿಂದ ಅಭಿಷೇಕ ಮಾಡಿ ಗಂಧಾದಿಗಳಿಂದ ಪೂಜಿಸಿ ಅದೇ ಹಾಲಿನಲ್ಲಿ ಇಟ್ಟಿದ್ದರೆ ಸಂತಾನ ಪ್ರಾಪ್ತಿಯು.

೧. ಬಲಮುರಿ ಶಂಖವನ್ನು ಆಕಳಹಾಲಿನಿಂದ ಅಭಿಷೇಕಮಾಡಿ ಶ್ರೀಗಂಧಾದಿಗಳಿಂದ ಪೂಜಿಸಿದರೆ ಇಷ್ಟಾರ್ಥ ಸಿದ್ಧಿಯಾಗುವದು.

೨. ಬಲಮುರಿಶಂಖವನ್ನು ದಿವಸಕ್ಕೆ ಎರಡುಸಾರೆ ಪೂಜಿಸಿದರೆ ಶ್ರೀವೃದ್ಧಿಯಾಗುವದು

೩. ಬಲಮುರಿಶಂಖವನ್ನು ದಿವಸಕ್ಕೆ ಮೂರುಸಾರೆ ಪೂಜಿಸಿದರೆ ಯಶಸ್ಸು ಕೀರ್ತಿ, ರಾಜ್ಯ ಪ್ರಾಪ್ತಿಯಾಗುತ್ತವೆ.



೪. ಬಲಮುರಿ ಶಂಖವನ್ನು ದಿವಸಕ್ಕೆ ನಾಲ್ಕು ಸಾರೆ ಪೂಜಿಸಿದರೆ ಸಂತಾನಪ್ರಾಪ್ತಿಯು.

೫. ಬಲಮುರಿ ಶಂಖವನ್ನು ದಿವಸಕ್ಕೆ ಐದು ಸಾರೆ ಬಿಳಿಬಣ್ಣದ ಆಕಳ ಹಾಲಿನಿಂದ ಅಭಿಷೇಕಮಾಡಿ ಚಂದನಾದಿಗಳಿಂದ ಪೂಜಿಸಿದರೆ ಪುತ್ರ ಪ್ರಾಪ್ತಿ ಯಾಗುವದು.

ಬಲ ಮುರಿ ಶಂಖವು ಒಂದೇಬಣ್ಣದ್ದಿರಬೇಕು. ನಾನಾಪ್ರಕಾರದ ಬಣ್ಣವಿದ್ದರೆ ಮನಸ್ಸು ಚಂಚಲವಾಗುವದು. ಶಂಖವನ್ನು ಶ್ರದ್ಧಾ ಭಕ್ತಿಯಿಂದ ಪೂಜಿಸಿದರೆ ಶೀಘ್ರವಾಗಿ ಫಲ ಕೊಡುವದು. ಮತ್ತು ಪೂಜೆಮಾಡುವವರು ಪೂಜ್ಯವಸ್ತುಗಳಲ್ಲಿ ಜಾತಿ, ಕುಲ, ಭೇಧ ಭಾವತೋರದೆ ಭಕ್ತಿಯಿಂದ ಪೂಜೆ ಮಾಡಬೇಕು. ಸಿಹಿಯನ್ನು ಯಾರುತಿಂದರೂ ಸಿಹಿಯಾಗಿಯೇ ತೋರುವಂತೆ ಯಾರೇ ಆಗಲಿ ಭಕ್ತಿಯಿಂದ ಪೂಜಿಸಿದರೆ ಅವರಿಗೆ ಫಲವು ನಿಶ್ಚಯವಾಗಿಯೇ ದೊರೆಯುವದು.

### ಅಥ ದ್ವಿತೀಯ ಪೂಜಾಕಲ್ಪ

ಸಮುದ್ರ ಯೋತ್ತರೇ ಕೋಣೇ ಶಂಖ ಧಾರಾಪತೀ ಪುರೀ ।
ತಸ್ಯಾಂ ಶಂಖಾಃ ಸಮುತ್ಪನ್ನಾ ವಾಮಾವರ್ತಾಃ ಸಹಸ್ರಶಃ ||೧||
ತೇಷಾಂ ಮಧ್ಯೇಽಪಿ ರಾಜ್ಯಾಖ್ಯೋ ದಕ್ಷಿಣಾ ವರ್ತತಾಂಗತಃ ।
ಶಂಖಾ ರೂಢೋಽಪಿ ಸರ್ವತ್ರ ಜಲೇ ಖೇಲತಿ ನಿರ್ಭಯಃ ||೨||
ಕೃಷ್ಣಾಯುಧಮಿವ ಶ್ರೇಯಾನ್ ಸಮಾನ್ಯಃ ಸರ್ವಶಂಖೈಃ|
ತಂಕಶ್ಚಿತ್ ಪುಣ್ಯಯೋಗೇನ ಪ್ರಾಪ್ನೋತಿ ಪುರುಷೋತ್ತಮ ||೩||
ತಸ್ಯರಾಜಾ ವಂಶಯಾತಿ ಧನ ಧಾನ್ಯೈರ್ನ ಮುಚ್ಯತೇ ।
ದೃಷ್ಟ್ವಾಶ್ವ ಗಜ ಸರ್ಪೇಭ್ಯೋನ ಭಯಂ ತಸ್ಯ ಸಂಭವೇತ್ ||೪||
ಶಾಕಿನಿ ಭೂತ ವೇತಾಲಾಃ ಪಿಶಾಚಾ ಬ್ರಹ್ಮರಾಕ್ಷಸಃ ।
ಪ್ರಭವಂತಿ ನನ್ಯೇ ತಸ್ಯಯತ್ರ ಶಂಖೋ ಮಹಾದ್ಯುತಿಃ ||೫||
ಅಕಾಲೇ ಮರಣಂ ನಾಸ್ತಿ ದುರ್ಜನೈ ನೋರ್ಪಹನ್ಯತೇ ।
ಅಗ್ನಿ ಚೋರಭಯಂ ನೈವ ಶುಭಂಸರ್ವತ್ರ ಜಾಯತೇ ||೬||
ಸುರಭಿದುಗ್ಧ ವರ್ಣಾಭೋಧೂಸರ ಚ್ಛಾಯತಾಂಗತಃ ।

ನಗ್ರಾ ಹ್ಯಾತಿ ಸಹಿ ದೋಷಾಣಾಂ ಪ್ರಭವತಿ ಪರಿಕಲ್ಪಿತಃ | ೭||
ರಕ್ತ ಪೀತ ಹರಿದ್ಭ ವೇತ್ ದ್ಯುತಿರಾಭ್ಯಂತರೇ ಭವೇತ್ |
ಸ ಶ್ರೀ ಸಂತಾನ ದಿಕ್ಕೀರ್ತಿಂ ಪ್ರದದಾತಿ ನಸಂಶಯ ಃ ||೮||

**ಅರ್ಥ**—ಸಮುದ್ರದ ಉತ್ತರ ಭಾಗದ ದ್ವಾರಕಾದಲ್ಲಿ ಎಡಮುರಿ ಶಂಖಗಳು ಸಾಕಷ್ಟು ಸಿಗುತ್ತವೆ. ಮತ್ತು ಅಲ್ಲಿ ಬಲಮುರಿ ಶಂಖಗಳು ಸಹ ದೊರೆಯುತ್ತವೆ. ಬಲಮುರಿ ಶಂಖವು ಎಲ್ಲ ಶಂಖಗಳಿಗೆ ರಾಜ ನಿರುವ ಹಾಗೆ ಇದ್ದು ಸಮುದ್ರದಲ್ಲಿರುವ ಎಲ್ಲ ಶಂಖಗಳ ಮೇಲೆ ಅಧಿಕಾರವನ್ನು ಚಲಾಯಿಸುತ್ತಿರುವದು. ಬಲಮುರಿಶಂಖವು ಭಗವಾನ್ ವಿಷ್ಣುವಿನ ಹಸ್ತ‐ದಲ್ಲಿರುವದರಿಂದ ಅದು ಮಂಗಲಕರವಾಗಿದೆ ಬಲ ಮುರಿ ಶಂಖವು ಇರುವಲ್ಲಿ ಸಕಲಸಂಪದಗಳು ಸ್ಥಿರವಾಗಿರುವವು ಬಲಮುರಿ ಶಂಖವಿದ್ದಲ್ಲಿ ಗಜ, ಅಶ್ವ, ಸರ್ಪಗಳ ಭಯವುಂಟಾಗುವದಿಲ್ಲ, ಭೂತ, ಪ್ರೇತ, ಪಿಶಾಚ, ಬೇತಾಳ ಬ್ರಹ್ಮರಾಕ್ಷಸಗಳಿಂದ ಭಯವಿಲ್ಲ, ಬಲ ಮುರಿಶಂಖ ವಿದ್ದವರನ್ನು ದುಷ್ಟರು ಏನೂಮಾಡಲಾರರು ಮತ್ತು ಅವರಿಗೆ ಶತ್ರುಗಳಭಯವೂ ಇರುವದಿಲ್ಲ ಅವರಿಗೆ ಚೋರಭಯ, ಅಗ್ನಿಭಯಗಳುಂಟಾಗುವದಿಲ್ಲ, ಬಲಮುರಿ ಶಂಖವು ಯಾರಲ್ಲಿರುವದೋ ಅವರಿಗೆ ಅಕಾಲ ಮರಣ ಭಯವೂ ಆಗುವದಿಲ್ಲ. ಬಲ ಮುರಿ ಶಂಖವನ್ನು ಆಕಳಹಾಲಿಸಿಂದ ಅಭಿಷೇಕ ಮಾಡಿ ಓಂ ಹ್ರೀಂ ಶ್ರೀಂ ಇತ್ಯಾದಿ ಬೀಜ ಮಂತ್ರಗಳನ್ನು ಹೇಳುತ್ತ ಶ್ರೀಗಂಧ ಕುಂಕುಮ ಅಕ್ಷತೆ, ತುಳಸಿಪತ್ರಿ ಪುಷ್ಪಗಳಿಂದಲೂ, ಕರ್ಪೂರಾದಿ ಸುಗಂಧದ್ರವ್ಯಗಳಿಂದಲೂ ಪೂಜಿಸಿ "ಓಂ ಹ್ರೀಂ ಶ್ರೀಂ ಕ್ಲೀಂ ಐಂ ಮಹಾಲಕ್ಷ್ಮ್ಯೈ|| ಈ ಮಂತ್ರವನ್ನು ಜಪಮಾಡಬೇಕು ಬಂಗಾರ ಮತ್ತು ಬೆಳ್ಳಿ ಮಿಶ್ರಮಾಡಿ ಒಂದು ಪೀಠವನ್ನು ಮಾಡಿಸಿ. ಅದರ ಮೇಲೆ ಈ ಶಂಖವನ್ನು ಇಟ್ಟು ಲಕ್ಷ್ಮೀ ಯಂತ್ರವನ್ನು ಪೂಜಿಸಿದರೆ ಮಹಾಲಕ್ಷ್ಮಿಯು ಸದಾ ಪ್ರಸನ್ನಳಾಗಿರುವಳು.

**ಮಹಾಲಕ್ಷ್ಮೀ ಮಂತ್ರ**-"ಓಂ ಹ್ರೀಂ ಶ್ರೀಂ ಕ್ಲೀಂ ಐಂ ಮಹಾಲಕ್ಷ್ಮೀ ಮಮ ವಾಂಛಿತಾರ್ಥ ಸಿದ್ಧಿಂ ಕುರುಕುರು ಸ್ವಾಹಾ" ಈ ಪ್ರಕಾರ ಮಹಾಲಕ್ಷ್ಮಿ ಮೂಲ ಮಂತ್ರವನ್ನು ಜಪ ಮಾಡಬೇಕು.



ಓಂ ಹ್ರೀಂ ಶ್ರೀಂ ಕ್ಲೀಂ ಬ್ಲೂ ಶ್ರೀದಕ್ಷಿಣಾವರ್ತ ಶಂಖಯ ಭಗವತೇ ವಿಶ್ವರೂಪಾಯ ಸರ್ವಯೋಗಿಶ್ವರಾಯ ತ್ರೈಲೋಕ್ಯ ನಾಥಾಯ, ಸರ್ವಕಾಮ ಪ್ರದಾಯ ಸರ್ವಋದ್ಧಿ ಸಂವೃದ್ಧಿ ವಾಂಛಿತಾರ್ಥ ಸಿದ್ಧಿದಾಯ ನಮಃ ||

ಅಗ್ರತೋ ಲಕ್ಷಬೀಜಾನ್ ಸಂಚಿತ್ಯ ಧ್ಯಾನಾದಿ ಪುರಸ್ಸರಂ ಪೂರ್ವೋಕ್ತ ಮಂತ್ರೇಣ ಕರ್ಪೂರಾದಿ ಸುಗಂಧ ದ್ರವ್ಯೇಣ ಶ್ವೇತ ಪುಷ್ಪೈಃ ಪ್ರತ್ಯಹಂ ಪೂಜಾ ಕಾರ್ಯಂ ಕುರ್ಯಾತ್ ||

ಪೂರ್ವಂ ಸ್ವರ್ಣಭಾಗಂ ೧೨ ತಾರಂ ೧೬ ಪ್ರವೇಶ್ಯ ತದ ನಂತರ ಸುವರ್ಣ ಸುವರ್ಣ ಪತ್ರಸ್ಯ ಉಪರಿ ನಿಮ್ನ ಯಂತ್ರಂ ಸಮಾಲಿಖ್ಯ ತಸ್ಯ ಉಪರಿ ಶಂಖಃ ಮೋಚ ನೀಯಃ ರೌಪ್ಯ ಮಂಜೂಷಾಯಾಂ ಸಂಸ್ಥಾಪ ಯೇತ್ ! ತೇನರಕ್ಷಣೀಯಃ | ಏತಸ್ಯ ಪೂಜಾ ಗೃಹೇ ಲಕ್ಷ್ಮೀ ಪುಷ್ಕಲಾ ಸ್ಯಾತ್ ||

## ಅಥ ತೃತೀಯ ಪೂಜಾಕಲ್ಪ

ಅಥಾತಃ ಸಂಪ್ರವಕ್ಷ್ಯಾಮಿ ಲೋಕಾನಾಂ ಹಿತಕಾಮ್ಯಯಾ |
ದಕ್ಷಿಣಾ ವರ್ತ ಮಹಾತ್ಮ್ಯಂ ಹವಂಕಾಮಿತದಾಯಕಮ್ ||೧||
ಶ್ವೇತವರ್ಣೋ ಮಹಾನ್ ಭವ್ಯಃ ಪೀತ ವರ್ಣಸ್ತು ಮಧ್ಯಮಃ |
ಶ್ಯಾಮಭಿಃ ಕೀಟ ಕಾರ್ಕೀ ಭ್ಯೋ ನೈವವಾಂಛಿತ ದಾಯಕಃ ||೨||
ಯಥಾ ಯಥಾ ಯುದ್ಧ ಮಾನ್ ಸ್ಯಾತ್ ತಥಾಧಿಕ ಫಲ ಪ್ರದಃ
ಗೃಹಿತ್ವಾ ಗೌಪ್ಯ ಸಂಸ್ಥಾನೇ ಸ್ಥಾಪ್ಯೋ ದೇವಾಲಯೇ ಕ[illegible]
ಅಷ್ಟಮ್ಯಾಂಚ ಚತುರ್ದಶ್ಯಾಂ ಪ್ರತಿಷ್ಠಾಪ್ಯ ಸುವಿಸ್ತೃತೈಃ |
ಸೂರಿ ಮಂತ್ರೈಃ ಸ್ವಮಂತ್ರೇಣ ಶುಭ ಲಗ್ನೇ ಫಲ ಪ್ರದಃ ೪|
ಷಡ್ರ ದಕ್ಷಾ ದ್ರವ್ಯ ಮಾದಾಯ ವಾಸಃ ಸಿದ್ಧಾರ್ಥ ಪುಷ್ಪಕೈಃ
ಕರ್ಪೂರ ಚಂದನಾದ್ಯೈಶ್ಚ ಅರ್ಚಯೇತ್ ಗಂಗಾವಾರಿಣಾ ೫|

ಬಲಮುರಿ ಶಂಖದ ಮಹಾತ್ಮೆಯು ಅತ್ಯದ್ಭುತವಾಗಿದ್ದು ಸರ್ವ ಮನೋರಥಗಳನ್ನು ಪೂರ್ಣಗೊಳಿಸುವಂಥದಾಗಿದೆ. ಬಿಳಿ ಬಣ್ಣದ ಬಲಮುರಿ ಶಂಖವು ಸರ್ವ ಶ್ರೇಷ್ಠವಾಗಿದ್ದು ಹಳದಿ ವರ್ಣದ ಶಂಖವು ಮಧ್ಯಮ

ತರಗತಿಯದು ಕಪ್ಪು ಬಣ್ಣದ ಶಂಖವು ಕನಿಷ್ಠ ತರಗತಿಯದು ಶಂಖವು ದೊಡ್ಡದಿದ್ದಷ್ಟು ಹೆಚ್ಚು ಫಲ ದಾಯಕವಾಗಿರುವದು. ಬಲಮುರಿ ಶಂಖವನ್ನು ಗಾರ್ಹ್ಯಸ್ಥಳದಲ್ಲಿ ಮತ್ತು ಪವಿತ್ರ ಸ್ಥಳದಲ್ಲಿ ಅಷ್ಟಮಿ ಅಥವಾ ಚತುರ್ದಶಿ ತಿಥಿಯದಿವಸ ವಿಧಾನ ಪೂರ್ವಕವಾಗಿ ಬೀಜಾಕ್ಷರ ಜಪದೊಂದಿಗೆ ಶುಭ ಲಗ್ನದಲ್ಲಿ ಪ್ರತಿಷ್ಠಾಪನೆಮಾಡಬೇಕು, ಗೋಕ್ಷೀರದಿಂದ ಅಭಿಷೇಕಿಸಿ ಪವಿತ್ರವಾದ ಗಂಗಾಜಲದಿಂದಲೂ ಚಂದನ, ಪತ್ರಿ ಪುಷ್ಪಗಳಿಂದಲೂ, ಸಂಗಂಧ ದ್ರವ್ಯಗಳಿಂದಲೂ ಪೂಜೆಮಾಡಿ ಹಾಲು, ಹಣ್ಣು ಹಾಗೂ ಪಕ್ವಾನ್ನಗಳನ್ನು ನೈವೇದ್ಯಮಾಡುವದರಿಂದ ಬಲಮುರಿ ಶಂಖವು ಇಷ್ಟಾರ್ಥ ಫಲವನ್ನು ನಿಶ್ಚಯವಾಗಿ ಕೊಡುವದು. ಮತ್ತು ಈ ಮಂತ್ರವನ್ನು ಪಠಿಸಬೇಕು.

**ಮಂತ್ರ**—ಓಂ ಹ್ರೀಂ ಶ್ರೀಂ ಕ್ಲೀಂ ಬ್ಲೂಂ ಪ್ರದಕ್ಷಿಣಾಯ ನಮಃ
ನಮೋ ಭಗವಾನ್ ದಕ್ಷಿಣಾವರ್ತ ಕ್ಷೀರೋದಧಿತನಯ
ಲಕ್ಷ್ಮೀ ಭ್ರಾತಃ | ಅತ್ರ ಸಪರಿವಾರೇಣ....ಅಮುಕ ಸ್ವಗೃಹೇ
ತಿಷ್ಠ ತಿಷ್ಠ | ಪೂಜಾಂಚ ಬಲಿಂ ಗೃಹ ಗೃಹ | ಮನೋರಥಾನ್
ಪೂರಯ ಪೂರಯ | ಶ್ರೀನಮಃ |

## ಶಂಖ ಸ್ತುತಿ

ಸಾಮಾಗ್ರಿ ಸಕಲಾರ್ಥ ಸಿದ್ಧಿದಂ ಸುಶ್ವೇತ ವರ್ಣ ಕಮಲಾಸಹೋದರಂ
ಕ್ಷೀರೋದಿಪುತ್ರಂ ಮನಸೋ ಅರ್ಥದಾಯಕಂ ರಾಜ್ಯಾರ್ಥಂ ಸಂತಾನ
ಫಲ ಪ್ರದಂಭಜೇ ||
ಕಲ್ಯಾಣಾವರ್ತ ಸುರಮ್ಯನಾಥ | ಮನೋರಥಂ ಪೂರ್ಣಯಮೇ
ಸಮಗ್ರಂ ||

ಬಿಳಿಯಬಣ್ಣದ ಶಂಖವು ಶ್ರೇಷ್ಠವಾದದ್ದು ಮತ್ತು ಮಹಾಲಕ್ಷ್ಮಿಯ ಸಹೋದರನು. ಸಕಲಮನೋರಥಗಳನ್ನು ಪೂರ್ಣಗೊಳಿಸುವಂಥದು. ಶಕ್ತಿಶಾಲಿಯು, ರಾಜ್ಯ, ಧನ, ಸಂತಾನ, ಸೌಭಾಗ್ಯಗಳನ್ನು ಅನುಗ್ರಹಿಸುವ ಸ್ವಸಾಮರ್ಥ್ಯವುಳ್ಳ ಮತ್ತು ವಾಸುದೇವ ಸ್ವರೂಪನಾದ ಬಲಮುರಿಶಂಖವನ್ನು ಪ್ರಾರ್ಥಿಸುತ್ತೇನೆ.



ಹೇ ಶಂಖರಾಜ ಪಾಂಚಜನ್ಯ ಲೋಕ ಕಲ್ಯಾಣ ಕರ್ತಾ ಪಾಪಹಾರಿ ಇಷ್ಟಾರ್ಥ ಸಿದ್ಧಿದಾತಾ, ವಿಘ್ನವಿನಾಶಕ, ಶತ್ರುಗಳ ಹೃದಯ ಭಂಜಕ, ಭಕ್ತರ ಭಜಕ, ನನ್ನ ಎಲ್ಲ ಮನೋರಥಗಳನ್ನು ಪೂರ್ಣಗೊಳಿಸು.

## ಶಂಖ ಧ್ಯಾನ

ಓಂ ಸರ್ವಾಭರಣ ಭೂಷಿತಾಯ ಪ್ರಶಂಸ್ಯಾಂ ಗೋಪಾಂಗ
ಸಂಯುತಾಯ |
ಕಲ್ಪವೃಕ್ಷಾಧಃ ಸ್ಥಿತಾಯ ಕಾಮಧೇನು ಚಿಂತಾಮಣಿ ನವನಿಧಿ
ರೂಪಾಯ ||
ಚತುರ್ದಶ ರತ್ನ ಪರಿವೃತಾಯ ಮಹಾಸಿದ್ಧಿ ಸಹಿತಾಯ ಲಕ್ಷ್ಮೀದೇವಿ
ಯುಕ್ತಾಯ ಕೃಷ್ಣದೇವತಾ ಲಲಿತಾಯ ಶ್ರೀಶಂಖ ಮಹಾಸಿದ್ಧಿಯೇ
ನಮಃ ||

ಸರ್ವ ಆಭರಣಗಳಿಂದ ವಿಭೂಷಿತವಾದ, ಉತ್ತಮವಾದ ಅಂಗ, ಪ್ರತ್ಯಂಗಯುಕ್ತವಾದ ಕಲ್ಪವೃಕ್ಷದಕೆಳಗೆ ಪ್ರತಿಷ್ಠಿತವಾದ, ಕಾಮಧೇನು' ಚಿಂತಾಮಣಿ, ನವನಿಧಿ ಸ್ವರೂಪವಾದ ಹದಿನಾಲ್ಕು ರತ್ನಗಳಿಂದ ಪರಿವೃತ್ತವಾಗಿರುವ, ಅಣಿಮಾದಿ ಅಷ್ಟ ಸಿದ್ಧಿಯುಕ್ತವಾಗಿರುವ ಮಹಾಲಕ್ಷ್ಮೀದೇವತೆಯೊಡಗೂಡಿ ಭಗವಾನ್ ವಿಷ್ಣುವಿನ ಹಸ್ತದಲ್ಲಿ ಆಯುಧ ರೂಪದಿಂದ ಪರಿಶೋಭಿಸುತ್ತಿರುವ ಬಲಮುರಿ ಶಂಖವನ್ನು ಪ್ರಾತಃ ಕಾಲ, ಮಧ್ಯಾಹ್ನ, ಸಂಧ್ಯಾ ಈ ತ್ರಿಕಾಲಗಳಲ್ಲಿ ಭಕ್ತಿ ಪೂರ್ವಕವಾಗಿ ನಮಸ್ಕರಿಸುತ್ತೇನೆ

## ಅರ್ಘ ಶಂಖ ಪ್ರತಿಷ್ಠಾ ಮಂತ್ರ

ಓಂ ಸರ್ವತೋಭದ್ರಾಯ ಸರ್ವಾಭೀಷ್ಟ ಫಲ ಪ್ರದಾಯ |
ಸರ್ವಾರಿಷ್ಟ ದುಷ್ಟಕಷ್ಟ ನಿವಾರಕಾಯ |
ಕಾಮಿತಾರ್ಥ ಪ್ರದಾಯ ಶಂಖಾಯ ಸ್ವಾದಿಷ್ಟಾಯ
ಕಾಯಭಾಸ್ಕರೀಂ ಶ್ರೀಂ ಬ್ಲೂಂ ಕ್ಲೀಂ ನಮಃ ||ಸ್ವಾಹಾ||

ಈ ಮಂತ್ರವನ್ನು ಧ್ಯಾನಮಾಡಿ ಶಂಖವನ್ನು ಪ್ರತಿಷ್ಠಾಪನೆ ಮಾಡಬೇಕು ನಂತರ ಜಪಮಾಡಬೇಕು.

### ಜಪ ಮಂತ್ರ

ಓಂ ಹ್ರೀಂ ಶ್ರೀಂ ಭ್ಲೂಂ ಶ್ರೀಧರ ಕರಸ್ಥಾಯ ಪಯೋ ನಿಧಿ ಜಾತಾಯ ।
ಶ್ರೀಕರಾಯ ಭಕ್ತ ಜನ ಪೂಜ್ಯಾಯ ದಕ್ಷಿಣಾವರ್ತ ಶಂಖಾಯ ।
ಸುರ ಪೂಜ್ಯಾಯ ದೇವಾದಿಷ್ಟಯ ಕ್ಲೀಂ ಶ್ರೀಂ ನಮಃ ॥

### ಅಥ ಶಂಖ ಪ್ರಾರ್ಥನೆ

ಓಂ ಅಗ್ನಿ ಋಷಿಃ ಪವಮಾನಃ ಪಾಂಚಜನ್ಯಃ ಪುರೋಹಿತಃ ।
ತ್ವಂ ಪುರಾ ಸಾಗರೋತ್ಪನ್ನಃ ವಿಷ್ಣು ನಾ ವಿಧೃತಃ ಕೇ ।
ನಿರ್ಮಿತಃ ಸರ್ವದೇವೈಶ್ಚ ಪಾಂಚ ಜನ್ಯಃ ನಮೋಸ್ತು ತೇ ॥

ಯಾವ ದೇ ಮಾಸದ ಶುಕ್ಲ ಪಕ್ಷದ ದ್ವಿತಿಯಾತಿಥಿ ಅಶ್ವಿನಿ ನಕ್ಷತ್ರ ಕೂಡಿರುವದಿವಸ ಪ್ರಾತಃ ಕಾಲದ ಆರು ಗಂಟೆಗೆ ಆಕಳಹಾಲಿನಲ್ಲಿ ಬಲ ಮುರಿಶಂಖವನ್ನು ಅದರ ಪೃಷ್ಠಭಾಗ ಕೆಳಗೆ ಇರುವಂತೆ ಬೆಳ್ಳಿಯ ಪಾತ್ರೆಯಲ್ಲಿ ಇಡಬೇಕು. ಆಸಮಯದಲ್ಲಿ ಆಸ್ಥಳದೊಳು ತುಪ್ಪದ ದೀಪ ಹಚ್ಚಿರಬೇಕು. ನಂತರ ಸಾಯಂಕಾಲ ಸೂರ್ಯಾಸ್ತವಾದ ಬಳಿಕ ಆಶಂಖವನ್ನು ಪಾತ್ರೆಯಿಂದ ಹೊರಗೆತೆಗೆದು ಶುದ್ಧ ಜಲದಿಂದ ಅಭಿಷೇಕಮಾಡಿ ಶುಭ್ರವಾದ ವಸ್ತ್ರದಿಂದ ಅದ್ರವವನ್ನು ಒರೆಸಿ (ತೆಗೆದು) ಶ್ರೀಗಂಧಾದಿ ದ್ರವ್ಯಗಳಿಂದಲೂ, ಪತ್ರಿ, ಪುಷ್ಪಗಳಿಂದಲೂ, ಧೂಪ. ದೀಪಗಳಿಂದಲೂ ಕರ್ಪೂರ ಆರತಿ ಯಿಂದಲೂ ಪೂಜಿಸಿ ನೈವೇದ್ಯವನ್ನು ಸಮರ್ಪಿಸಿ ನಂತರ ಪುನಃ ಆ ಶಂಖವು ಮುಳುಗುವಷ್ಟು ಹಾಲನ್ನು ಆಪಾತ್ರೆಯಲ್ಲಿ ಹಾಕಿ ಅದರಲ್ಲಿ ಶಂಖವನ್ನಿಟ್ಟು ಶಂಖದ ಮೂಲ ಮಂತ್ರವನ್ನು ಯಥಾ ಪ್ರಕಾರ ಜಪಮಾಬೇಕು. ಈ ಪ್ರಕಾರ ಬಲಮುರಿ ಶಂಖವನ್ನು ಪೂಜಿಸುತ್ತ ಹೋದರೆ ಪೂಜಿಸುವವನ ಮನೋರಥಗಳೆಲ್ಲವೂ ಪೂರ್ಣವಾಗುವವು.

**ಇತಿ ಬಲ ಮುರಿಶಂಖ ಮಹಾತ್ಮೆ ಸಮಾಪ್ತಿ**



## ಬಿಳಿಯ ಎಕ್ಕೆ (ಮಂದಾರ) ಗಣಪತಿ ಮಹಿಮೆ

**ಅರ್ಕ ಅಥವಾ ಮಂದಾರ**—ಎಕ್ಕೆಯ ಗಿಡಗಳಲ್ಲಿ ಎರಡು ಜಾತಿಗಳು ಅವೆ. ಒಂದು ನೀಲಿ ಮಿಶ್ರ ಕೆಂಪುಬಣ್ಣದ ಹೂಗಳುಳ್ಳ ಎಕ್ಕೆಯಗಿಡ, ಇನ್ನೊಂದು ಬಿಳಿಯ ಹೂಗಳ ಎಕ್ಕೆಯಗಿಡ ಹೀಗೆ ಎರಡು ವಿಧವಾಗಿವೆ. ಬಿಳಿಯ ಎಕ್ಕೆಯ ಗಿಡವು ಪ್ರಕೃತಿಯ ವನಸ್ಪತಿಗಳಲ್ಲಿ ವಿಲಕ್ಷಣವಾದ ಮಹತ್ತರ ವುಳ್ಳದ್ದಾಗಿದೆ. ಪೂರ್ವದ ತಾಂತ್ರಿಕ ಸಂಪ್ರದಾಯದ ತತ್ಪುರುಷ ನುಡಿಯಂತೆ ಯಾವಸ್ಥಳದಲ್ಲಿ ಬಿಳಿಯಎಕ್ಕೆಯ ಗಿಡ ಇರುವದೋ ಅಲ್ಲಿ ಅಸದೃಶವಾದ ಸಾಮರ್ಥ್ಯವಿರುವದು. ಮತ್ತು ಅಲ್ಲಿ ಗುಪ್ತವಾದ ಒಂದು ದೈವೀ ಶಕ್ತಿಯೂ ಇರುವದು.

ಬಿಳಿಯ ಎಕ್ಕೆಯ ಗಿಡವನ್ನು ರವಿವಾರ ಪುಷ್ಯ ನಕ್ಷತ್ರ ಇರುವದಿವಸ ಬೆಳಿಗ್ಗೆ ಪೂಜೆ ಮಾಡಿತರಬೇಕು. ಅಂದರೆ ಶನಿವಾರ ಸಾಯಂಕಾಲ ಆ ಗಿಡವನ್ನು ಪೂಜಿಸಿ. ಆಹ್ವಾನ ನೀಡಿ ಬರಬೇಕು ನಾನು ನನ್ನ ಕಾರ್ಯ ಸಿದ್ಧಿಗಾಗಿ ನಿನ್ನನ್ನು ತೆಗೆದುಕೊಂಡು ಹೋಗಲು ಬೆಳಿಗ್ಗೆ ಬರುತ್ತೇನೆ ನೀನು ಸರ್ವ ಶಕ್ತಿ ಯೊಂದಿಗೆ ಜಾಗ್ರತೆಯಾಗಿ ಇರಬೇಕು ಎಂದು ಹೇಳಿಬರಬೇಕು. ಮರುದಿವಸ ಬೆಳಿಗ್ಗೆ ಹೋಗಿ ಅದರ ಮೂಲ (ಬೇರು)ವನ್ನು ಪೂಜಿಸಿ ನೈವೇದ್ಯ ಮಾಡಿ ಸ್ವಲ್ಪ ಸಮಯದನಂತರ ಆ ಬೇರನ್ನು ಕತ್ತರಿಸಿ ತರಬೇಕು ಮನೆಗೆ ಬಂದನಂತರ ಯಥಾ ಪ್ರಕಾರ ಪೂಜಿಸಿ ನೈವೇದ್ಯಾದಿಗಳನ್ನು ಸಮರ್ಪಿಸಬೇಕು. ದತ್ತಾತ್ರೇಯ ತಂತ್ರದಲ್ಲಿ ಬಿಳಿಯ ಎಕ್ಕೆಯ ಗಣಪತಿಯ ಮಹತ್ವವನ್ನು ಚನ್ನಾಗಿತಿಳಿಸಿದ್ದಾರೆ. ಆ ಎಕ್ಕೆಯ ಬೇರನ್ನುತಂದು ಬಲಗೈ ಹೆಬ್ಬೆರಳಗಾತ್ರದ ಗಣಪತಿ ಮೂರ್ತಿಯನ್ನು ಮಾಡಿಸಿ ಅದನ್ನು ಪ್ರತಿಷ್ಠಾಪನೆ ಮಾಡಿ ಮೂಲಮಂತ್ರ ದಿಂದ ಜಪಿಸಿದರೆ ಆ ಗಣಪತಿಯಲ್ಲಿ ವಿಚಿತ್ರವಾದ ಶಕ್ತಿಯು ಸಂಗ್ರಹವಾಗುವದು.

### ಎಕ್ಕೆಯ ಗಿಡದ ಮಹತ್ವ

ಬಿಳಿಯ ಎಕ್ಕೆಯ ಗಿಡಕ್ಕೆ ಸಂಸ್ಕೃತ ಭಾಷೆಯಲ್ಲಿ ಶ್ವೇತ ಅರ್ಕ ಅಥವಾ ಮಂದಾರ ವೃಕ್ಷ ಎಂದು ಕರೆಯುತ್ತಾರೆ.

ತಾಂತ್ರಿಕ ಗ್ರಂಥಗಳಲ್ಲಿ ಮತ್ತು ನರಪತಿ ಜಯ ಚರ್ಯಾ ಬ್ರಹ್ಮ ಯಾವಳು ಗ್ರಂಥಗಳಲ್ಲ ವನಸ್ಪತಿಗಳ ಬಗ್ಗೆ ಸವಿಸ್ತಾರವಾಗಿ ತಿಳಿಸಿದ್ದಾರೆ. ನಮಗೆಬೇಕಾದ ವನಸ್ಪತಿಯ ಗಿಡವನ್ನು ಒಂದು ದಿವಸ ಮುಂಚಿತವಾಗಿ ಸಾಯಂಕಾಲದ ಸಮಯದಲ್ಲಿ ಆ ಗಿಡವನ್ನು ಜಲ, ಭಸ್ಮ, ಗಂಧ, ಕುಂಕುಮ, ಅಕ್ಷತೆ, ಪತ್ರಿ, ಪುಷ್ಪ, ಧೂಪ, ದೀಪಗಳಿಂದ ಪೂಜಿಸಿ ಕರ್ಪೂರ ದೀಪಾದಿಗಳನ್ನು ಬೆಳಗಿ ಟೆಂಗಿನಕಾಯಿ ಒಡೆದು ಹಣ್ಣು ನೈವೇದ್ಯ ಮಾಡಿ ನಮಸ್ಕರಿಸಿ ಈ ಮಂತ್ರ ಹೇಳಬೇಕು.

"ಮಮಕಾರ್ಯ ಸಿದ್ಧಿಂ ಕುರ ಕುರುಸ್ವಾಹಾ"

ಈ ಮಂತ್ರವನ್ನು ೨೧ ಸಾರೆ ಉಚ್ಚರಿಸಿ ಅಕ್ಷತೆಗಳನ್ನು ಆ ಗಿಡದ ಮೇಲೆ ಹಾಕಬೇಕು ನಂತರ "ಹೇ ವನಸ್ಪತಿದೇವತಾ ನಾನು ನಿನ್ನನ್ನು ತೆಗೆದು ಕೊಂಡು ಹೋಗಲು ನಾಳೆ ಪ್ರಾತಃ ಕಾಲ ಬರುತ್ತೇನೆ. ನೀನು ನಿನ್ನ ಸರ್ವಶಕ್ತಿ ಯೊಂದಿಗೆ ಸಿದ್ಧಳಾಗಿ ಇರಬೇಕು" ಎಂಬುದಾಗಿ ಆಮಂತ್ರಣ ಕೊಟ್ಟು ಬರಬೇಕು.

ನಂತರ ಮಾರನೆಯ ದಿವಸ ಉಃಕಾಲ ೪। ಗಂಟೆಗೆ ಎದ್ದು ಸ್ನಾನ ಪೂಜಾದಿಕಾರ್ಯಗಳನ್ನು ಮುಗಿಸಿ ಎಲ್ಲ ಪೂಜಾ ಸಾಮಗ್ರಿಗಳೊಂದಿಗೆ ಆ ಗಿಡದ ಹತ್ತಿರ ಹೋಗಿ ಈ ಕೆಳಗಿನ ಮಂತ್ರ ಪಠಣ ಮಾಡುತ್ತ ಅಭಿಮಂತ್ರಿಸಬೇಕು.

### ಮಂತ್ರ

ಓಂ ವೇತಾಲಾಶ್ಚ ಪಿಶಾಚಾಶ್ಚ ರಾಕ್ಷಸಾಶ್ಚ ಸರೀಸೃಪಾಃ ।
ಅಪಸರ್ಪಂತು ತೇ ಸರ್ವೇ ವಕ್ಷಾದ ಸ್ಮಾತ್ ಶಿವಾಜ್ಞಯಾ ||೧||
ಓಂ ನಮಸ್ತೇ ಮೃತ ಸಂಭೂತೇ ಬಲ ವೀರ್ಯ ವಿವರ್ಧಿನೀ ।
ಬಲ ಮಾಯುಶ್ಚ ಮೇ ದೇಹಿ ಪಾಪಾನ್ ಮಾಂತ್ರಾಹಿ
ದೂರತಃ ||೨||
ಓಂ ಯೇನ ತ್ವಾಂ ಖನತೇ ಬ್ರಹ್ಮಾಯೇ ನತ್ವಾಂಖನತೇ ।
ಯೇನ ಹೊಂದ್ರೋಥ ವರುಣೋ ಯೇನ ತ್ವಾಮುಪ ಚಕ್ರಮೇ ।೩।
ತೇನಾ ಹಂಖನ ಯಿಷ್ಯಾಮಿ ಮಂತ್ರ ಪೂತೇನ ಪಾಣಿನಾ ।|



ಮಾಂಪಾತು ತೇಪಾನಿ ಪತಿತೇ ಮಾಂತೇ ಜೋऽನ್ಯಥಾ
ಭವೇತ್ ||೪||

ಅತ್ರೈವ ತಿಷ್ಠ ಕಲ್ಯಾಣಿ ಮಮಕಾರ್ಯಕರೀಭವ ।
ಮಮಕಾರ್ಯೇ ಕೃತ ಸಿದ್ಧಾ ತತಃ ಸ್ವರ್ಗಂಗ ಮಿಷ್ಯಸೀ ||೫||

**ಅರ್ಥ**— ಬೇತಾಳ, ಪಿಶಾಚ, ರಾಕ್ಷಸ, ಡೊಣ್ಣೆಕಾಟ, ಸರ್ಪ ಹಾಗೂ ದುಷ್ಟ ಪ್ರಾಣಿಗಳು ಈ ಎಕ್ಕೆಯ ಗಿಡದ ಸಮೀಪದಲ್ಲಿ ಬರುವದಿಲ್ಲ. ಈ ವೃಕ್ಷದಚೂರ್ಣವನ್ನು ಪ್ರತಿದಿವಸ ಸೇವಿಸಿದರೆ ವೀರ್ಯ ವೃದ್ಧಿ ಬಲ, ತೇಜಸ್ಸು ಪ್ರಾಪ್ತಿಯಾಗುವವು. ಮತ್ತು ಆಯುಷ್ಯ ವೃದ್ಧಿಯಾಗುವದು.

ನಂತರ ಓಂ ಹ್ರೀಂ ಚಂಡೇ ಹೂಂ ಫಟ್ ಸ್ವಾಹಾ ||

ಈ ಮಂತ್ರವನ್ನು ಪಠಣ ಮಾಡುತ್ತ ಎಕ್ಕೆಯ ಗಿಡದಬೇರನ್ನು ಕತ್ತರಿಸಿ ತೆಗೆಯಬೇಕು.

ನಂತರ ಓಂ ಹ್ರೀಂ ಕ್ಷೀಂ ಫಟ್ ಸ್ವಾಹಾ ||

ಈ ಮಂತ್ರವನ್ನು ಉಚ್ಚರಿಸುತ್ತ ಆ ಬೇರಿನ ಮೇಲೆ ಇರುವ ನಿರುಪಯುಕ್ತವಾದ ಭಾಗಗಳನ್ನು ತೆಗೆದು ಹಾಕಿ

ಓಂ ವನದಂಡೇ ಮಹಾದಂಡಾಯ ಸ್ವಾಹಾ ||

ಈ ಮಂತ್ರವನ್ನು ಏಳು ಸಾರೆ ಉಚ್ಚರಿಸಿ ಆ ಬೇರನ್ನು ಮನೆಗೆ ತರಬೇಕು ನಂತರ ಅದನ್ನು ನೆಲದಮೇಲೆ ಇಡದೆ ಎತ್ತರವಾದ ಸ್ಥಳದಲ್ಲಿ ಇಟ್ಟು ಪಂಚಗವ್ಯಗಳಿಂದ ಅಭಿಷೇಕ ಮಾಡಬೇಕು.

ಪಂಚಗವ್ಯಗಳು— ಆಕಳಹಾಲು, ಮೊಸರು, ತುಪ್ಪ ಗೋಮೂತ್ರ, ಗೋಮಯ (ಶೆಗಣಿ) ಆ ಬಳಿಕ ಶುಭ್ರವಾದ ವಸ್ತ್ರದಿಂದ ಅದನ್ನು ಒರೆಸಿ ದ್ರವತೆಗೆದು ಭಸ್ಮ, ಗಂಧ, ಕುಂಕುಮ, ಅಕ್ಷತೆ, ಪತ್ರಿ, ಪುಷ್ಪ, ಧೂಪ, ದೀಪಗಳಿಂದ ಪೂಜಿಸಿ ಆರತಿಮಾಡಿ ನೈವೇದ್ಯ ಮಾಡಬೇಕು, ಆಬಳಿಕ ಆ ಬೇರು ಅಥವಾ ಗಣಪತಿಯನ್ನು ರೇಶಿಮೆಯ ಕೆಂಪು ವಸ್ತ್ರದಲ್ಲಿ ಸುತ್ತಿ ಇಡಬೇಕು, ಕಟ್ಟಿಕೊಳ್ಳುವದಾದರೆ ಬೆಳ್ಳಿಯ ತಾಯತದಲ್ಲಿ ಇರಿಸಿ ಧರಿಸಬೇಕು.

**ಇತಿ ಅರ್ಕ ಗಣಪತಿ ಪೂಜಾ ಮಹಿಮೆ ಸಮಾಪ್ತಿ**

### ಬಿಳಿಯ ಎಕ್ಕೆಯ ಗಿಡದ ಬೇರು ತರುವ ವಿಧಾನ ಮತ್ತು ಸಮಯ

ಸೂರ್ಯೇಂದು ಗ್ರಹಣೇ ಪ್ರಾಪ್ತೇ ದೀಪೋತ್ಸವೇ ದಿನತ್ರಯೇ ।
ಪುಷ್ಯ ಮೂಲಾರ್ಕಯೋಗೇಚ ಮಹಾ ನವಮಿ ವಾಸರೇ ॥೧॥
ಖದಿರೇಣಚ ಕೀಲೇನ ಪ್ರೋದ್ಧರೇತಾ ಮಹೌಷಧಿ ಃ ।
ಬಲಿ ಪೂಜಾ ವಿಧಾನೇನ ಸರ್ವಕರ್ಮಾನು ಸಿದ್ಧಯೇ ॥೨॥

**ಅರ್ಥ**–ಸೂರ್ಯ-ಚಂದ್ರರ ಗ್ರಹಣ ಕಾಲದಲ್ಲಿ, ದೀಪಾವಳಿ ಸಮಯದಲ್ಲಿ, (ನರಕಚತುರ್ದಶಿ, ದೀಪಾವಳಿ ಅಮಾವಾಸಿ, ಬಲಿ ಪ್ರತಿಪದ ಈ ಮೂರು ದಿವಸಗಳಲ್ಲಿ) ರವಿವಾರ ಪುಷ್ಯ ನಕ್ಷತ್ರ ಕೂಡಿರುವಕಾಲದಲ್ಲಿ, ಅಥವಾ ರವಿವಾರ ಮೂಲ ನಕ್ಷತ್ರಕೂಡಿರುವಾಗ ಮತ್ತು ಮಹಾನವಮಿಯ ದಿವಸ ಬಿಳಿಯಎಕ್ಕೆಗಿಡದ ಬೇರು, ಜೊಡ್ಡು, ಟೊಂಗೆ, ಎಲೆ, ಹೂವು ಕಾಯಿಗಳನ್ನು ತಂದು ತಾಂತ್ರಿಕ ಕಾರ್ಯದಲ್ಲಿ ಉಪಯೋಗಿಸಿದರೆ ಕಾರ್ಯ ಸಿದ್ಧಿಯಾಗುವದು. ಗ್ರಹಣಕಾಲದಲ್ಲಿ ಪೂಜೆಮಾಡಿ ತಂದರೆ ವಿಶೇಷ ಶಕ್ತಿ ಸಂಚಯವಾಗಿರುವದು.

---

# ಸಾಲಿ ಗ್ರಾಮಗಳು

## (ನರಸಿಂಹ ಪುರಾಣದಲ್ಲಿ ಉಕ್ತವಾದ ಪ್ರಕಾರ)

ದೇವಾದಿದೇವ ಸರ್ವಜ್ಞ ಲೋಕೇಶ ಕಮಲಾಸನ ।
ತ್ವತ್ ಪ್ರಸಾದಾನ್ಮಯಾ ಸರ್ವಂ ಜ್ಞಾತಂಜ್ಞೇಯಂ ವಿಧೇಧುನಾ ॥
ಇದಾನೀಂ ಶ್ರೋತುಮಿಚ್ಛಾಮಿ ಸಾಲಿ ಗ್ರಾಮಸ್ಯ ಲಕ್ಷಣಂ ।
ತಸ್ಯೋತ್ಪತ್ತಿಂ ನಿದಾನಂಚವರ್ಣಂ ಕ್ಷೇತ್ರಂ ಫಲಾಫಲಂ ॥

ಎಂಬುದಾಗಿ ನಾರದ ಮಹರ್ಷಿಗಳು ಬ್ರಹ್ಮದೇವನನ್ನು ಕುರಿತು ಪ್ರಾರ್ಥಿಸಲಾಗಿ ಸೃಷ್ಟಿಕರ್ತನಾದ ಬ್ರಹ್ಮನು ಸಾಲಿಗ್ರಾಮಗಳ ಉತ್ಪತ್ತಿ ಸ್ಥಳ ಅವುಗಳ ಲಕ್ಷಣ ಹಾಗೂ ಫಲಾಫಲ ಇತ್ಯಾದಿ ವಿಷಯಗಳನ್ನು ವಿವರಿಸಿದನು.

### ಸಾಲಿಗ್ರಾಮ ಉತ್ಪತ್ತಿ ದೇಶ

ಆಸೀದವಂತಿ ದೇಶೇಷು ನಾಮ್ನಾತು ಹರಿಪರ್ವತಃ ।
ಸಾಲಿಗ್ರಾಮ ಇತಿಕ್ಷೇತ್ರೇ ಹರಿಚಕ್ರ ಶಿಲಾಮಯೇ ॥೧॥
ಯಸ್ಯಸ್ಮರಣ ಮಾತ್ರೇಣ ಸರ್ವಪಾಪ ಕ್ಷಯೋಭವೇತ್ ।
ತತ್ರೈವ ಗಂಡಕಾಖ್ಯಾತಾ ನದೀಪಾಪ ಪ್ರಣಾಶನೀ ॥೨॥
ಯಜ್ಜಲಸ್ಪೃಷ್ಟಿ ಮಾತ್ರೇಣ ವಿಷ್ಣು ಸಾಯುಜ್ಯಮಶ್ನುತೇ ।
ತಸ್ಮಿನ್ ಪರ್ವತ ಮೂಲೇತು ಚಕ್ರತೀರ್ಥಂ ಮಹತ್ಸರಃ ॥೩॥
ತಸ್ಯಾನದ್ಯಾ ನಿದಾನಂಚ ಪ್ರವದಂತಿ ಪುರಾವಿದಃ ।
ತಸ್ಮಿನ್ ಪರ್ವತ ತೀರ್ಥೇಸ್ತಿ ಸಾಕ್ಷಾತ್ ಚಕ್ರಧರೋಹರಿಃ ॥೪॥
ಲಕ್ಷ್ಮ್ಯಾಧರಿತ್ರ್ಯಾ ಸಹಿತೋ ಸಾನ್ನಿಧ್ಯಂ ಕುರುತೇಮುನೇ ।
ತಚ್ಛಿಲಾಸು ಚಸರ್ವಾಸು ಹರಿಕ್ಷೇತ್ರ ಗತಾಸುಚ ॥೫॥
ಶೀತವಾತ ವಿನಿರ್ಮುಕ್ತೇ ಶೈಲಗರ್ಭೇ ಮುನೀಶ್ವರ ।
ಸರ್ವಲಕ್ಷಣ ಸಂಯುಕ್ತಾ ಸಾಲಿಗ್ರಾಮ ಶಿಲಾಭವೇತ್ ॥೬॥
ಸಾಕ್ಷಾತ್ ಲಕ್ಷ್ಮೀಪತೇರ್ವಿಷ್ಣೋಃ ಪ್ರಸಾದಾತ್ ಪರಮೇಷ್ಠಿನಃ ।
ಉತ್ಪತ್ತಿ ಸ್ತಚ್ಛಿಲಾನಾಂತು ಪುಣ್ಯಕಾಲೇಷು ವಿದ್ಯತೇ ॥೭॥

## ಸಾಲಿಗ್ರಾಮಗಳಲ್ಲಿ ಚಕ್ರೋತ್ಪತ್ತಿ ಕ್ರಮ

ಪಶ್ಚಾತ್ ಸಹಸ್ರವರ್ಷಾಣಾಂ ಸಾಲಿಗ್ರಾಮಸ್ಯ ಚಕ್ರಕೇ ।
ವಜ್ರಕೀಟ ಇತಿಖ್ಯಾತೋಜಂತುರ್ಭೂತ್ವಾ ಹರಿಸ್ಸ್ವಯಮ್ ॥೧॥

ಹಿರಣ್ಮಯೋ ಮಹಾವೀರ್ಯೋ ವಿದ್ಯುಲ್ಲೇಖಾ ಸಮಪ್ರಭಃ ।
ಸಾಲಿಗ್ರಾಮ ಶಿಲಾಗರ್ಭಮಾಸಾದ್ಯ ಕಲನಿಸ್ಸ್ವನಃ ॥೨॥

ತತ್ರಸ್ಥಶ್ಚಕ್ರ ಚಿಹ್ನಾನಿ ಮುಖೇನ ಕುರುತೇಮುನೇ ।
ನಾನಾ ವಿಧಾನಿ ಚಕ್ರಾಣಿ ನಾನಾರೂಪಾಣಿ ಲೀಲಯಾ ॥೩॥

ಅಂತರ್ದಧಾತಿ ತತ್ರೈವ ಬಹುಕಾಲಾದ ನಂತರಮ್ ।
ಸಾನ್ನಿಧ್ಯಂ ಕುರುತೇ ತತ್ರ ಸಾಕ್ಷಾಲ್ಲಕ್ಷ್ಮೀಪತಿಸ್ಸದಾ ॥೪॥

ತದಾಲೋಕನ ಮಾತ್ರೇಣ ಸರ್ವಪಾಪ ಕ್ಷಯೋಭವೇತ್ ।
ಉತ್ಪತ್ತಿಃನಾರದೋಕ್ತ್ಯೈವಂ ವಿಜ್ಞೇಯಾ ಮುನಿಪುಂಗವ ॥೫॥

ಆವಂತಿ ದೇಶದಲ್ಲಿ ಹರಿ ಎಂಬ ಹೆಸರಿನ ಪರ್ವತವು ಇರುವದು. ಅಲ್ಲಿ ಪರಮ ಪವಿತ್ರವಾದ ಶಿಲಾಮಯ ಪ್ರದೇಶದಲ್ಲಿ ಸಾಲಿಗ್ರಾಮ ಎಂಬ ಹೆಸರಿನ ಕ್ಷೇತ್ರವಿರುವದು. ಅಲ್ಲಿಯೇ ಗಂಡಕಿ ಎಂಬ ಹೆಸರಿನಿಂದ ಪ್ರಸಿದ್ಧವಾದ ಒಂದು ನದಿಯು ಇರುವದು. ಆ ಪುಣ್ಯಕರವಾದ ನದಿಯ ಜಲವನು ಸ್ಪರ್ಶ ಮಾಡುವದರಿಂದ ಅರ್ಥಾತ್ ಸ್ನಾನ ಮಾಡುವದರಿಂದ ವಿಷ್ಣು ಸಾಯುಜ್ಯ ಪದವಿಯು ಪ್ರಾಪ್ತವಾಗುವದು ಮತ್ತು ಆ ಪರ್ವತದ ಕೆಳಭಾಗದಲ್ಲಿ ಚಕ್ರತೀರ್ಥವೆಂಬ ಹೆಸರಿನ ಸರೋವರವು ಇರುವದು. ಆ ಸರೋವರದಲ್ಲಿ ಸಾಕ್ಷಾತ್ ವಿಷ್ಣುವು ಲಕ್ಷ್ಮೀ ಸಮೇತನಾಗಿ ವಾಸವಾಗಿರುವನು. ಆ ಪರ್ವತದ ಶಿಲಾಗರ್ಭದೊಳು ಲಕ್ಷ್ಮೀಪತಿ ವಿಷ್ಣುವಿನ ಪ್ರಸಾದದಿಂದ ಪವಿತ್ರವಾದ ಸಾಲಿಗ್ರಾಮಗಳು ಉತ್ಪತ್ತಿಯಾಗುವವು.

ಈ ಸಾಲಿಗ್ರಾಮಗಳಲ್ಲಿ ಸಾಕ್ಷಾತ್ ವಿಷ್ಣುವು ಕೀಟ ಜಂತುವಾಗಿರುವನು. ಆ ಸಾಲಿಗ್ರಾಮಗಳು ಹಿರಣ್ಮಯವಾಗಿಯೂ, ಮಹಾಶಕ್ತಿಶಾಲಿಯಾಗಿಯೂ, ವಿದ್ಯುತ್‌ಸಂಚಾರವುಳ್ಳವುಗಳಾಗಿಯೂ, ಪ್ರಕಾಶಮಾನವಾಗಿಯೂ, ಇರುವವು. ಅವುಗಳಲ್ಲಿಯೂ ಚಕ್ರ ಮೊದಲಾದ ಚಿಹ್ನಗಳ



ನಾನಾ ವಿಧವಾಗಿ ನಾನಾ ರೂಪದಿಂದ ತಮ್ಮಷ್ಟಕ್ಕೆ ತಾವೇ ಲೀಲಾಯಮಾನವಾಗಿ ಚಿತ್ರಿಸಲ್ಪಡುವವು. ಈ ರೀತಿಯಾಗಿ ಸಹಸ್ರಾರು ವರ್ಷಗಳಿಂದ ನಿರ್ಮಾಣವಾಗುತ್ತಿರುವ ಸಾಲಿಗ್ರಾಮಗಳಲ್ಲಿ ಸಾಕ್ಷಾತ್ ಲಕ್ಷ್ಮೀಪತಿಯಾದ ಭಗವಾನ್ ವಿಷ್ಣು ಪರಮಾತ್ಮನು ಸದಾವಕಾಲದಲ್ಲಿ ವಾಸವಾಗಿರುವನು. ಅಂಥ ಪರಮಪವಿತ್ರವಾದ ಸಾಲಿಗ್ರಾಮಗಳ ದರ್ಶನ ಮಾತ್ರದಿಂದಲೇ ಮನುಷ್ಯರ ಸಮಸ್ತ ಪಾಪಗಳ ಕ್ಷಾಲನೆಯಾಗುವದು.

## ಸಾಲಿಗ್ರಾಮಗಳ ಬಣ್ಣಗಳು

ಶ್ವೇತ, ಪೀತ ತಥಾರಕ್ತಾ ಕೃಷ್ಣಾ ಶಾಡ್ವಲ ಸನ್ನಿಭಾ ।
ಕಪಿಲಾಚತಥಾ ಧೂಮ್ರಾ ಕಲಂಕಾ ಬಹುವರ್ಣಿನೀ ॥೧॥

ಅತಿವರ್ಣಾ ವಿವರ್ಣಾಚ ತಥಾ ಸಂದಿಗ್ಧವರ್ಣಿನೀ ।
ಏವಂ ವಿಧೈಸ್ತಥಾ ವರ್ಣೈ ರೂಪೈ ನಾನಾ ವಿಧಾಶಿಲಾ ॥೨॥

ಸಾಲಿಗ್ರಾಮಗಳಲ್ಲಿ ಬಿಳುಪು, ಹಳದಿ, ಕೆಂಪು, ಕಪ್ಪು, ಹಸಿರು, ಕಪಿಲ (ಮಾಸ) ಧೂಮ್ರ ಮಿಶ್ರಬಣ್ಣದವು ಚಿಕ್ಕೆಗಳುಳ್ಳವು, ಅತಿದಟ್ಟವರ್ಣ, ಬಣ್ಣವಿಲ್ಲದ, ಸಂದಿಗ್ಧಬಣ್ಣ, ಹೀಗೆ ನಾನಾ ರೀತಿಯ ಬಣ್ಣದವು ನಾನಾ ರೀತಿಯ ಆಕಾರದವಾಗಿರುವವು.

## ಸಾಲಿಗ್ರಾಮಗಳ ಕ್ಷೇತ್ರಗಳ ಬಣ್ಣಗಳು

ಕ್ಷೇತ್ರಂತು ವಾಸುದೇವಸ್ಯ ಶ್ವೇತವರ್ಣಂ ಪ್ರಚಕ್ಷತೇ ।
ಪೀತಾ ಹೈರಣ್ಯ ಗರ್ಭಾಸ್ಯಾದ್ರಕ್ತಾ ಪ್ರದ್ಯುಮ್ನ ರೂಪಿಣೀ ॥೧॥

ಕೃಷ್ಣಾತು ವಿಷ್ಣು ಸುಕ್ಷೇತ್ರಂಸ್ಯಾಚ್ಛಿಲಾ ಮುನಿಪುಂಗವ ।
ಶ್ರೀಮನ್ನಾರಾಯಣ ಕ್ಷೇತ್ರಂ ಹರಿತಾಂಗಂ ವಿದುರ್ಬುಧಾಃ ॥೨॥

ಕಪಿಲಾ ನಾರಸಿಂಹೀ ಸ್ಯಾದ್ವಾಮನೀತ್ವತ ಸೀನಿಭಾ ।

ಬಿಳಿಯ ಬಣ್ಣದ ಸಾಲಿಗ್ರಾಮವು ವಾಸುದೇವನ ಕ್ಷೇತ್ರವು. ಹಳದಿ ಬಣ್ಣದ ಸಾಲಿಗ್ರಾಮವು ಹಿರಣ್ಯಗರ್ಭ ಕ್ಷೇತ್ರವು. ಕೆಂಪು ಬಣ್ಣದ ಸಾಲಿಗ್ರಾಮವು ಪ್ರದ್ಯುಮ್ನ ರೂಪದ ಕ್ಷೇತ್ರವು. ಕಪ್ಪು ಬಣ್ಣದ ಸಾಲಿಗ್ರಾಮವು

ವಿಷ್ಣುವಿನ ಕ್ಷೇತ್ರವು. ಹಸಿರು ಬಣ್ಣದ ಸಾಲಿಗ್ರಾಮವು ಶ್ರೀಮನ್ನಾರಾಯಣನ ಕ್ಷೇತ್ರವು ಕಪಿಲಾ ಬಣ್ಣದ ಸಾಲಿಗ್ರಾಮವು ನಾರಸಿಂಹನ ಕ್ಷೇತ್ರವು ಅಗಸೀ ಬಣ್ಣದ ಸಾಲಿಗ್ರಾಮವು ವಾಮನ ಕ್ಷೇತ್ರವು.

### ಸಾಲಿಗ್ರಾಮಗಳ ಕ್ಷೇತ್ರ ವರ್ಣಭೇದ ಫಲ

ಶ್ರೇಷ್ಠಾಸ್ಯಾತ್ತು ವಿಶೇಷೇಣ ಧೂಮ್ರಾತು ಯತಿಪೂಜನೇ ।
ಕಲಂಕಾ ಕ್ಷಯಕಾರೀಸ್ಯಾದನಂತೋ ಬಹುವರ್ಣಭಾಕ್ ॥೧॥

ಅತಿವರ್ಣಾ ದುಃಖದಾಸ್ಯಾದ್ವಿವರ್ಣಾ ಕುಲನಾಶಿನೀ ।
ಸಂದಿಗ್ಧವರ್ಣಾಹಂತ್ರೀ ಸ್ಯಾದಿತಿ ಕ್ಷೇತ್ರಫಲಂ ಮುನೇ ॥೨॥

ಪತ್ನೀಘ್ನೀಕಪಿಲಾಚೈವ ನೀಲಾಲಕ್ಷ್ಮೀ ಪ್ರದಾಯಿನೀ ।
ಪುಷ್ಟಿದಾ ವೃದ್ಧಿದಾ ಶ್ಯಾಮಾರಕ್ತಾ ರಾಜ್ಯ ಕರೀತಥಾ ॥೩॥

ಅತಿರಕ್ತಾ ಮೃತ್ಯುದಾಸ್ಯಾದ್ಗೌರಾ ಧನಕರೀತಥಾ ।
ಬಹುವರ್ಣಾ ಶ್ರೀಕರೀಸ್ಯಾ ದ್ವಿವರ್ಣಾ ನಿಷ್ಫಲಾತಥಾ ॥೪॥

ಶ್ವೇತವರ್ಣಾ ಮೋಕ್ಷದಾಸ್ಯಾತ್ ಸಂದಿಗ್ಧಾ ಸರ್ವನಾಶಿನೀ ।

ಧೂಮ್ರ ವರ್ಣದ ಸಾಲಿಗ್ರಾಮಗಳು ಶ್ರೇಷ್ಠ ತರಗತಿಯವಾಗಿದ್ದು ಯತಿಗಳ ಪೂಜೆಗೆ ಯೋಗ್ಯವಾದವುಗಳು. ಬಹಳ ಬಣ್ಣಗಳುಳ್ಳ ಹಾಗೂ ಮೈಮೇಲೆ ಚುಕ್ಕೆಗಳುಳ್ಳ ಸಾಲಿಗ್ರಾಮಗಳು ಕ್ಷಯಕಾರಿಯಾದವುಗಳು. ದಪ್ಪ ಬಣ್ಣದ (ಅತಿವರ್ಣ) ಸಾಲಿಗ್ರಾಮಗಳು ದುಃಖಕರನಾದವುಗಳು. ಮಸ ಮಸಕಾದ ಬಣ್ಣವುಳ್ಳ ಸಾಲಿಗ್ರಾಮಗಳು ಕುಲನಾಶಕರವಾದವುಗಳು. ಸಂದಿಗ್ದ ಬಣ್ಣದ ಸಾಲಿಗ್ರಾಮಗಳು ಭೂಮಿ ಹಾನಿಮಾಡತಕ್ಕವುಗಳು. ಕಪಿಲ ಬಣ್ಣದ ಸಾಲಿಗ್ರಾಮಗಳು ಪತ್ನಿಗೆ ಮರಣವನ್ನುಂಟು ಮಾಡತಕ್ಕವು. ನೀಲಿ ಬಣ್ಣದ ಸಾಲಿಗ್ರಾಮಗಳು ಲಕ್ಷ್ಮೀ (ಸಂಪತ್) ಪ್ರದವಾದವುಗಳು. ಶ್ಯಾಮ ಬಣ್ಣದ ಸಾಲಿಗ್ರಾಮಗಳು ಆರೋಗ್ಯವನ್ನುಂಟು ಮಾಡುವವು. ರಕ್ತ (ಕೆಂಪು) ಬಣ್ಣದ ಸಾಲಿಗ್ರಾಮಗಳು ರಾಜ್ಯ ಲಾಭ, ಭೂಮಿ ಲಾಭ ಮಾಡತಕ್ಕವುಗಳು. ಅತಿಕೆಂಪು ಬಣ್ಣದ ಸಾಲಿಗ್ರಾಮಗಳು ಮೃತ್ಯುಪ್ರದ ವಾದವುಗಳು ಬಿಳಿಯ ಬಣ್ಣದ ಸಾಲಿಗ್ರಾಮಗಳು ಧನಲಾಭವನ್ನು



ಕೊಡುವವು ಬಹಳ ಬಣ್ಣಗಳುಳ್ಳ ಸಾಲಿಗ್ರಾಮಗಳು ಶ್ರೀ (ಸಂಪತ್ತು) ಉಂಟುಮಾಡತಕ್ಕವುಗಳು. ಯಾವ ಬಣ್ಣವಿಲ್ಲದ ಮಾಸಿದ ಬಣ್ಣದ ಸಾಲಿಗ್ರಾಮಗಳು ಯಾವ ಫಲವನ್ನೂ ಕೊಡಲಾರವು. ಬಿಳಿಯ ವರ್ಣದ ಸಾಲಿಗ್ರಾಮಗಳು ಮೋಕ್ಷದಾಯಕವು. ಸಂದಿಗ್ಧ ಬಣ್ಣದ ಸಾಲಿಗ್ರಾಮಗಳು ಸರ್ವನಾಶ ಮಾಡತಕ್ಕವುಗಳು ಆಗಿರುವವು.

### ಸಾಲಿಗ್ರಾಮದ ರಂಧ್ರ ಪ್ರಮಾಣ

ಸೂತ್ರೇಣ ವೇಷ್ಟಯೇತ್ ಮಧ್ಯಂ ಸಾಲಿಗ್ರಾಮಸ್ಯ ಬುದ್ಧಿಮಾನ್ ।
ತ ದಷ್ಟಾಂಶ ಪ್ರಮಾಣಂಸ್ಯಾತ್ ಉತ್ತಮಂ ಯಸ್ಯ
ಗಂಹ್ವರಮ್ ॥೧॥

ವಕ್ತ್ರೇ ಸೂತ್ರಾಷ್ಟಮೋ ಭಾಗ ಉತ್ತಮಾ ಮಧ್ಯಮಾ ಉಭೌ ।
ಭಾಗತ್ರಯಂ ಜಘನ್ಯಸ್ಯಾತ್ ಸಾಲಿಗ್ರಾಮಸ್ಯ ಲಕ್ಷಣಮ್ ॥೨॥

ಸಾಲಿಗ್ರಾಮದ ಮಧ್ಯಭಾಗದ ಸುತ್ತಳತೆಯ ೧/೮ ಪ್ರಮಾಣದಷ್ಟು ರಂಧ್ರವಿದ್ದರೆ ಉತ್ತಮವು ಅಥವಾ ಸಾಲಿಗ್ರಾಮದ ಮುಖದ ಸುತ್ತಳತೆಯ ೧/೮ ಪ್ರಮಾಣದಷ್ಟು ರಂಧ್ರವಿದ್ದರೂ ಅದು ಉತ್ತಮವು ಹೀಗೆ ಇವೆರಡೂ ಅಳತೆಯ ರಂಧ್ರಗಳು ಉತ್ತಮವಾದವುಗಳು.

### ಸಾಲಿಗ್ರಾಮದ ಮುಖದ ಫಲ

ಅಧೋವಕ್ತ್ರಂ ಭೀಕರಂಚೋರ್ಧ್ವ ಸ್ಯಮುಚ್ಚಾಟನಾ ಕ್ರಿಯಂ ।
ಸಮವಕ್ತ್ರಂ ವಿಶಿಷ್ಟಂ ಸ್ಯಾತ್ಪಾರ್ಶ್ವಾಸ್ಯಂ ಭಾಗ್ಯಕೃದ್ಭವೇತ್ ॥೧॥

ವಕ್ರಾಸ್ಯಂ ವ್ಯಾಧಿ ಜನಕಂ ದೀರ್ಘಾಸ್ಯಂ ಸರ್ವಭಕ್ಷಕಂ ।
ಮೂರ್ತಿಭೇದಂ ಸಮಾಶೋಧ್ಯಪಶ್ಚಾಲ್ಲಕ್ಷಣ ಮಾದಿಶೇತ್ ॥೨॥

ಸಾಲಿಗ್ರಾಮದ ಮುಖವು ಅಧೋ (ಕೆಳಗಡೆ) ಮುಖವಾಗಿದ್ದರೆ ಭಯಂಕರವು. ಊರ್ಧ್ವ (ಮೇಲೆ) ಮುಖವಾದರೆ ಉಚ್ಚಾಟನವು ಮೇಲೆ ಅಲ್ಲ; ಕೆಳಗೂ ಅಲ್ಲ ಸಮಾನ ಮುಖವಾಗಿದ್ದರೆ ವಿಶಿಷ್ಟವು ಮಗ್ಗಲು (ಬಾಜು) ಮುಖವಾಗಿದ್ದರೆ ಸೌಭಾಗ್ಯವು. ಮುಖವು ಸೊಟ್ಟಾಗಿದ್ದರೆ

ರೋಗಾಕಾರಕವು ಮುಖವು ಬಹಳ ಅಗಲವಾಗಿದ್ದರೆ ಸರ್ವಭಕ್ಷಕವು. ಸಾಲಿಗ್ರಾಮದ ಮೂರ್ತಿಭೇದಗಳನ್ನು ತಿಳಿದುಕೊಂಡು ಅದರ ಲಕ್ಷಣಗಳನ್ನು ತಿಳಿಯಬೇಕು.

### ದಶಾವತಾರ ಮೂರ್ತಿಗಳ ಹೆಸರು

ಮೂರ್ತಯಶ್ಚಾಥ ಕಥ್ಯಂತೇ ಯಥಾವಚ್ಛೃಣು ಸತ್ತಮ ।
ಮತ್ಸ್ಯಃ ಕೂರ್ಮೋ ವರಾಹಶ್ಚ ನಾರಸಿಂಹೋಽಥವಾಮನಃ ॥೧॥
ರಾಮೋರಾಮಶ್ಚರಾಮಶ್ಚ ಬುದ್ಧಃ ಕಲ್ಕಿರಿಮೇದಶ ।

ಸಾಲಿಗ್ರಾಮಗಳಲ್ಲಿ ಮತ್ಸ್ಯ ಸಾಲಿಗ್ರಾಮ, ಕೂರ್ಮ ಸಾಲಿಗ್ರಾಮ, ವರಾಹ ಸಾಲಿಗ್ರಾಮ, ನಾರಸಿಂಹ ಸಾಲಿಗ್ರಾಮ, ವಾಮನ ಸಾಲಿಗ್ರಾಮ ಪರಶುರಾಮ ಸಾಲಿಗ್ರಾಮ, ಶ್ರೀರಾಮ ಸಾಲಿಗ್ರಾಮ, ಕೃಷ್ಣ ಸಾಲಿಗ್ರಾಮ, ಬುದ್ಧ ಸಾಲಿಗ್ರಾಮ, ಕಲ್ಕಿ ಸಾಲಿಗ್ರಾಮ ಹೀಗೆ ಸಾಲಿಗ್ರಾಮಗಳಲ್ಲಿ ಹತ್ತು ಭೇದಗಳು.

### ಸಾಲಿಗ್ರಾಮಗಳಲ್ಲಿ ಮೂರ್ತಿ ಲಕ್ಷಣಗಳು
(ನೃಸಿಂಹ ಪುರಾಣೋಕ್ತ)

### ಮತ್ಸ್ಯ ಮೂರ್ತಿ

ಮತ್ಸ್ಯಾಕೃತಿ ಮುಖಾಕಾರಾಂ ಮುಖ ಸಂದೃಶ್ಯ ಚಕ್ರಕಾಮ್ ।
ಶ್ರೀವತ್ಸ ಬಿಂದು ಮಾಲಾಭ್ಯಾಂ ಮತ್ಸ್ಯ ಮೂರ್ತಿಂ ಶುಭಾಂವಿದುಃ ॥

ಸಾಲಿಗ್ರಾಮದ ಮುಖವು ಮೀನದ ಮುಖದಂತೆ ಇದ್ದು ಹೃದಯದಲ್ಲಿ ಬಿಂದು ಆಕಾರದಲ್ಲಿ ಶ್ರೀವತ್ಸವಿರುವದು. ಮೀನ ಆಕಾರ ಚಕ್ರದ ಮತ್ಸ್ಯ ಮೂರ್ತಿಯಾಗಿರುವದು.

### ಮಹಾಕೂರ್ಮ ಮೂರ್ತಿ

ವರ್ತುಲಃ ಶ್ವೇ.ಲಾಕಾರೋವನಮಾಲಾಬ್ಜ ಚಕ್ರವಾನ್ ।
ಫಾಲಾಶೋ ಹೇಮಬಿಂದು ಶ್ರೀರ್ಮಹಾ ಕೂರ್ಮಸ್ತು ದುರ್ಲಭಃ ॥



ಆಮೆಯಂತೆ ದುಂಡಗಿದ್ದು ಕಮಲದ ಆಕಾರದಂತೆಯೂ ವನಮಾಲಾ ವಿಭೂಷಿತವಾದ ಕಮಲದ ಚಕ್ರವಿದ್ದು ಮುತ್ತಲ ಗಿಡದ ಕಾಂತಿ ಹಾಗೂ ಬಂಗಾರದ ಬಿಂದುವಿನ ಕಾಂತಿಯ ಕೂರ್ಮ ಮೂರ್ತಿಯಾಗಿರುವದು.

### ವರಾಹ ಮೂರ್ತಿ

ದೀರ್ಘಾಸ್ಯಂ ಶ್ಯಾಮಲಾಕಾರಂ ಪೃಥ್ವೀ ವಲಯವೇಷ್ಟಿತಮ್ ।
ದ್ವಾರ ದೇಶೇಲ ಸಚ್ಚಕ್ರಂ ವಾರಾಹಂ ತದ್ವಿ ದುರ್ಬುಧಾಃ ॥

ದೀರ್ಘವೂ, ಶಾಮಲಾ (ಕಪ್ಪು) ಕಾರವೂ ಆದ ಸಾಲಿಗ್ರಾಮವು ಪೃಥ್ವಿ ವಲಯದಿಂದ ಸುತ್ತುವರಿಯಲ್ಪಟ್ಟ ಹಾಗೂ ದ್ವಾರದಲ್ಲಿ ಶೋಭಿಸುವ ಚಕ್ರವಿರುವಂಥದು ವರಾಹ ಮೂರ್ತಿ ಸಾಲಿಗ್ರಾಮವು.

### ಬುದ್ಧಮೂರ್ತಿ

ರಂಧ್ರ ದೃಶ್ಯ ದ್ವಯೋಪಾಂತ ಅಂತಶ್ಚಕ್ರದ್ವಯಾನ್ವಿತಾಂ ।
ಶಿರೋ ದೃಷ್ಟ್ವೋರ್ಧ್ವಚಕ್ರಂಚ ಪಾರ್ಶ್ವಯೋರ್ವಾಪಿ ದೃಶ್ಯತೇ ॥
ನಾನಾ ವರ್ಣಮಯೀಂ ವಾಪಿ ಬುದ್ಧಮೂರ್ತಿಂ ಪ್ರಚಕ್ಷತೇ ॥

ರಂಧ್ರದ ಎರಡೂ ಕಡೆಗಳಲ್ಲಿ ಎರಡು ಚಕ್ರಗಳುಳ್ಳ, ಆ ಮಸ್ತಕವು ಊರ್ಧ್ವ ಚಕ್ರದಂತಿದ್ದು ಎರಡು ಪಾರ್ಶ್ವಗಳಲ್ಲಿಯೂ ಚಕ್ರಗಳು ಕಾಣಿಸುವವು ಮತ್ತು ನಾನಾ ರೀತಿಯ ಬಣ್ಣಗಳುಳ್ಳ ಸಾಲಿಗ್ರಾಮವು ಬುದ್ಧಮೂರ್ತಿಯಂತಿರುವದು.

### ನಾರಸಿಂಹ ಮೂರ್ತಿ

ದೀರ್ಘಾಸ್ಯಃ ಕಪಿಲಾಕಾರೋ ದೀರ್ಘ ಚಕ್ರೋ ಮಹೋದರಃ ।
ನಾರಸಿಂಹ ಇತಿ ಖ್ಯಾತೋಯೋಗ್ಯೋ ಮಸ್ಕರಿ ಪೂಜನೇ ॥

ಉದ್ದವಾದ ಮುಖ, ಕಪಿಲಾಕಾರವಾದ ಉದ್ದವಾದ ಚಕ್ರ, ದೊಡ್ಡ ಹೊಟ್ಟೆಯುಳ್ಳ ನಾರಸಿಂಹನಂತೆ ತೋರುವ ಸಾಲಿಗ್ರಾಮವು ನಾರಸಿಂಹ ಮೂರ್ತಿ ಸಾಲಿಗ್ರಾಮವು ಇದು ಯತಿಗಳ ಪೂಜೆಗೆ ಯೋಗ್ಯವಾದದ್ದು.

### ಲಕ್ಷ್ಮೀನೃಸಿಂಹ ಮೂರ್ತಿ

ವಾಮ ಭಾಗಸ್ಥ ಚಕ್ರಾಢ್ಯಃ ಕೃಷ್ಣವರ್ಣಸ್ಯಬಿಂದುಕಃ |
ಲಕ್ಷ್ಮೀನೃಸಿಂಹ ಆಖ್ಯಾತೋ ಭುಕ್ತಿಮುಕ್ತಿ ಫಲಪ್ರದಃ ||

ಎಡಭಾಗದಲ್ಲಿ ಚಕ್ರವಿದ್ದು ಕಪ್ಪು ವರ್ಣದ ಬಿಂದು ಸಹಿತವಾದ ಲಕ್ಷ್ಮೀನೃಸಿಂಹಮೂರ್ತಿ ಆಕಾರದ ಸಾಲಿಗ್ರಾಮವು ಮೋಕ್ಷ ಫಲವನ್ನು ಕೊಡುವಂಥದಾಗಿರುವದು.

### ವಾಮನ ಮೂರ್ತಿ

ಇಂದ್ರ ನೀಲನಿಭಾಕಾರಂ ವನಮಾಲಾಂ ಬುಜೋಜ್ವಲಮ್ |
ಹ್ರಸ್ವಂ ಸುವರ್ತುಲಂ ಚೈವ ವಾಮನಂಪರಿ ಚಕ್ಷತೇ ||

ಇಂದ್ರ ನೀಲಕ್ಕೆ ಸಮಾನವಾದ ಆಕಾರವುಳ್ಳ ವನಮಾಲಾ ವಿಭೂಷಿತವಾದ ಕಮಲದಂತೆ ಪ್ರಕಾಶಿತವಾದ ಚಿಕ್ಕವರ್ತುಲಾಕಾರದ ವಾಮನಮೂರ್ತಿಯಂತೆ ತೋರುವ ಸಾಲಿಗ್ರಾಮವು ವಾಮನಮೂರ್ತಿ ಸಾಲಿಗ್ರಾಮವು.

### ಪರಶುರಾಮ ಮೂರ್ತಿ

ಲಸತ್ ಪರಶು ರೇಖಾಢ್ಯೋ ದೂರ್ವಾಶ್ಯಾಮಸ್ತಥೋನ್ನತಃ |
ನಾಭಿದೇಶಲ ಸಚ್ಚಕ್ರೋರಾಮಸ್ಯಾಜ್ಜಮದಗ್ನಿಜಃ ||

ನಾಭಿ (ಹೊಕ್ಕಳ) ಪ್ರದೇಶದಲ್ಲಿ ಚಕ್ರವಿರುವ ಮತ್ತು ಕೊಡಲಿ ಆಕಾರದ ರೇಖೆಗಳುಳ್ಳ ಕರಿಕೆಯ ಬಣ್ಣದ ಶ್ಯಾಮವುಳ್ಳ ಎತ್ತರವಾದ ಸಾಲಿಗ್ರಾಮವು ಪರಶುರಾಮ ಮೂರ್ತಿ ಸಾಲಿಗ್ರಾಮವು.

### ಶ್ರೀರಾಮ ಮೂರ್ತಿ

ರೇಖಾಕಾರಧನುರ್ಬಾಣಂ ಸ್ಥೂಲಂ ದೀರ್ಘಂ ಸಬಿಂದುಕಂ |
ನಾಭಿಚಕ್ರಂ ಬಹುಚ್ಛಿದ್ರಂ ಶ್ಯಾಮಂದಾಶರಥಿಂವಿದುಃ ||

ಧನಸ್ಸು ಬಾಣಗಳು ರೇಖಾಕಾರವಾಗಿದ್ದು, ನಾಭಿ ಪ್ರದೇಶದಲ್ಲಿ ಚಕ್ರವಿರುವ ಕಪ್ಪು ಬಣ್ಣದ ಸ್ಥೂಲವೂ, ದೀರ್ಘವೂ ಬಿಂದು ಸಹಿತವೂ ಆಗಿರುವಂಥದು ಶ್ರೀರಾಮ ಮೂರ್ತಿ ಸಾಲಿಗ್ರಾಮವು.



### ಬಲರಾಮ ಮೂರ್ತಿ

ಹಲರೇಖೋ ಮುಸಲ ವಾಂಛುಕ್ಲಾಭೋ ವನದಾಮವಾನ್ |
ಮಧುಬಿಂದುಧರಃ ಶ್ರೀಮಾನ್ನಾಮಸ್ಸಂಕರ್ಷಣಶ್ಶುಭಃ ||

ನೇಗಿಲ (ಹಲ) ರೇಖೆಯು, ಒನಕೆಯ ಆಕಾರದಂತಿರುವ ಬಿಳಿಯ ವರ್ಣವಾದ ಜೇನುತುಪ್ಪದ ಬಿಂದುವುಳ್ಳ ಸಾಲಿಗ್ರಾಮವು ಬಲರಾಮ ಮೂರ್ತಿ ಸಾಲಿಗ್ರಾಮವು

### ಶ್ರೀಘನ ಮೂರ್ತಿ

ಸಹಸ್ರಬಿಂದು ಸಂಯುಕ್ತಂ ಧರ್ಮಚಕ್ರ ಸಮನ್ವಿತಂ |
ಶ್ವೇತವರ್ಣ ಮತಿಸ್ಲಕ್ಷ್ಣಂ ಸರ್ವಜ್ಞಂ ಶ್ರೀಘನಂವಿದುಃ ||

ಸಾವಿರ ಬಿಂದುಗಳುಳ್ಳ, ಧರ್ಮ ಚಕ್ರವಿರುವ, ಬಿಳಿಯ ಬಣ್ಣದ ಸಾಲಿಗ್ರಾಮವು ಶ್ರೀಘನ ಮೂರ್ತಿ ಸಾಲಿಗ್ರಾಮವು.

### ಕಲ್ಕಿ ಮೂರ್ತಿ

ಹಯರೇಖಾ ಸಮಾಯುಕ್ತೋ ರೇಖಾಕುಂತಾ ಯುಧಾಕೃತಿಃ |
ಶ್ವೇತವರ್ಣೋ ದೀರ್ಘಮುಖಃ ಕಲ್ಕಿರಿತ್ಯಭಿಧೀಯತೇ ||

ಕುದುರೆಯ ಆಕಾರದ ರೇಖೆಗಳುಳ್ಳ, ಭಲ್ಲೆಯ ಆಕಾರದ ರೇಖೆಯುಳ್ಳ, ದೀರ್ಘವಾದ ಮುಖ ಹಾಗೂ ಬಿಳಿಯ ಬಣ್ಣದ ಸಾಲಿಗ್ರಾಮವು ಕಲ್ಕಿ ಮೂರ್ತಿ ಸಾಲಿಗ್ರಾಮವು.

### ಶ್ರೀಕೃಷ್ಣ ಮೂರ್ತಿ

ರೇಖಾ ಪಂಚಾಯುಧಧರಂ ವನಮಾಲಾ ವಿಭೂಷಿತಂ |
ಅಬ್ಜ ಚಿಹ್ನಂ ಸೂಕ್ಷ್ಮಚಕ್ರಂ ಕೃಷ್ಣಮೇನಂ ಪ್ರಚಕ್ಷತೇ ||

ಐದು ಆಯುಧಗಳ ರೇಖೆಗಳುಳ್ಳ, ವನಮಾಲಾ ವಿಭೂಷಿತವಾದ ಕಮಲದ ಚಿಹ್ನವು, ಚಕ್ರವು ಸೂಕ್ಷ್ಮವಾಗಿರುವ ಸಾಲಿಗ್ರಾಮವು ಶ್ರೀಕೃಷ್ಣ ಮೂರ್ತಿ ಸಾಲಿಗ್ರಾಮವು.

## ಶ್ರೀ ಗೋಪಾಲ ಮೂರ್ತಿ

ಏತಲ್ಲಕ್ಷಣ ಸಂಯುಕ್ತಂ ಪಂಚಾಯುಧವಿಲೇಖನಂ ।
ನಿರಂಧ್ರಂ ವರ್ತುಲಂವಾಪಿ ದೀರ್ಘಂ ವಾಮಮಾಲಿಕಾಯುತಮ್ ।।೧।।

ಏಕೈಕಂ ವಾ ಪೃಥಗ್ವಾಮಿತತ್ತದ್ವಿಗ್ರಹವರ್ಣಕಂ ।
ಏವಂ ಲಕ್ಷಣ ಸಂಯುಕ್ತಂ ದೀರ್ಘಾಕಾರಂ ಮಹೋದರಂ ।।೨।।

ಗೋಪಾಲಮಿಯಂ ಪ್ರಾಹುಃ ಸರೇಖಾವಂಶ ಗಹ್ವರಂ ।।

ಐದು ಆಯುಧಗಳು ಚಿತ್ರಿತವಾಗಿರುವ, ರಂಧ್ರವು ವರ್ತುಲಾಕಾರವಾಗಿರುವ, ದೀರ್ಘವಾದ ವನಮಾಲಾ ಇರುವ ಆಯಾ ವಿಗ್ರಹಗಳು ಬೇರೆ ಬೇರೆಯಾಗಿ ಆಯಾ ವರ್ಣಗಳು ಬೇರೆ ಬೇರೆಯಾಗಿರುವವು. ಈ ಪ್ರಕಾರ ಲಕ್ಷಣವುಳ್ಳ ದೀರ್ಘಾಕಾರವಾಗಿ ಹೊಟ್ಟೆಯುಳ್ಳ ಸಾಲಿಗ್ರಾಮವು ಶ್ರೀ ಗೋಪಾಲ ಸಾಲಿಗ್ರಾಮವು.

## ದಧಿವಾಮನ ಮೂರ್ತಿ

ಅಧಶ್ಚಕ್ರಾಗ್ರ ವಿಲಸದ್ದಧಿ ಬಿಂದು ಸಮನ್ವಿತಂ ।
ವಾಮನಂ ನೀಲರಕ್ತಾಂಗಂ ವದಂತಿ ದಧಿವಾಮನಂ ।।

ಅಧೋಮುಖಿಯಾದ ಚಕ್ರವು ಮುಂಭಾಗದಲ್ಲಿದ್ದು ಮೊಸರಿನ ಬಿಂದು ಕೂಡಿಕೊಂಡಿದ್ದು ನೀಲಿ ಹಾಗೂ ಕೆಂಪು ಬಣ್ಣವಿರುವ ಸಾಲಿಗ್ರಾಮವು ದಧಿವಾಮನ ಮೂರ್ತಿ ಸಾಲಿಗ್ರಾಮವು.

## ದಧಿಗೋಪಾಲ ವಾಮನ ಮೂರ್ತಿ

ಊರ್ಧ್ವಚಕ್ರಾಗ್ರ ವಿಲಸದ್ದಧಿ ಬುದ್ಬುದಶೋಭಿತಂ ।
ಮೂರ್ತಿಂದಧಾತಿ ಗೋತ್ರೀ ಸ್ಯಾದದ್ಧಿ ಗೋಪಾಲವಾಮನಃ ।।

ಮೇಲೆ ಮುಖವಿರುವ ಚಕ್ರವು ಮುಂಭಾಗದಲ್ಲಿದ್ದು ಮೊಸರಿನ ಬುರುಗಿನಿಂದ ಶೋಭಿತವಾದ, ಕಶ್ಯಪ ಗೋತ್ರದ ಸಾಲಿಗ್ರಾಮವು ದಧಿಗೋಪಾಲ ವಾಮನ ಮೂರ್ತಿ ಸಾಲಿಗ್ರಾಮವು.



## ಸಂತಾನ ಗೋಪಾಲ ಮೂರ್ತಿ

ದಂಡ ಶೃಂಗಯುತಃ ಪಾರ್ಶ್ವೇ ವೇಣುನಾಶೋಭಿತೋ ಮುಖೇ ।
ಸಸ್ಮಾತ್ಸಂ ತಾನಗೋಪಾಲೋ ಪುತ್ರಪೌತ್ರಾಭಿ ವೃದ್ಧಿದಃ ।।

ಇಂದ್ರನೀಲನಿಭೋದೀರ್ಘೋ ವನಮಾಲಾ ವಿಭೂಷಿತಃ ।
ಅಂಕುಶಾಕಾರ ವದನೋ ಧರ್ಮಚಕ್ರ ಸಮನ್ವಿತಃ ।।

ದಂಡ (ಬಡಿಗೆ) ಶೃಂಗ (ಕೋಡು) ಗಳಿಂದ ಯುಕ್ತವಾದ ಮುಖದಲ್ಲಿ ಕೊಳಲು ಉಳ್ಳ, ಅಂಕುಶ ಆಕಾರದ ಮುಖವಿರುವ ಇಂದ್ರ ನೀಲಮಣಿಯಂತೆ ಪ್ರಕಾಶ ಮಾನವಾದ ದೀರ್ಘವನಮಾಲಾ ವಿಭೂಷಿತವಾದ ಧರ್ಮ ಚಕ್ರವಿರುವ ಸಾಲಿಗ್ರಾಮವು ಸಂತಾನ ಗೋಪಾಲ ಮೂರ್ತಿ ಸಾಲಿಗ್ರಾಮವು ಪುತ್ರ ಪೌತ್ರರನ್ನು ವೃದ್ಧಿಪಡಿಸುವದು.

## ಪ್ರದ್ಯುಮ್ನ ಮೂರ್ತಿ

ಜಪಾಕುಸುಮ ಸಂಕಾಶಂ ವನಮಾಲಾ ವಿಭೂಷಿತಂ ।
ಧನುರ್ಬಾಣಾಂಬುಜಧರಂ ಪ್ರದ್ಯುಮ್ನಂಚೇಷ್ಟದಂ ವಿದುಃ ।।

ದಾಸಾಳ ಹೂವಿನಂತೆ ಇರುವ, ವನಮಾಲಾ ವಿಭೂಷಿತವಾದ, ಧನಸ್ಸು, ಬಾಣಕಮಲ ಧರಿಸಿದಂಥ ಸಾಲಿಗ್ರಾಮವು ಪ್ರದ್ಯುಮ್ನ ಮೂರ್ತಿ ಸಾಲಿಗ್ರಾಮವು.

## ಅನಿರುದ್ಧ ಮೂರ್ತಿ

ಪ್ರದ್ಯುಮ್ನ ಲಕ್ಷಣೈರ್ಯುಕ್ತಂ ಸೂಕ್ಷ್ಮಚಕ್ರಲಸನ್ಮುಖಂ ।
ಸುವರ್ಣರೂಪ್ಯ ರೇಖಾಢ್ಯಮನಿರುದ್ಧಂ ವಿದುರ್ಬುಧಾಃ ।।

ಪ್ರದ್ಯುಮ್ನ ಸಾಲಿಗ್ರಾಮದ ಲಕ್ಷಣವಿದ್ದು ಮುಖದಲ್ಲಿ ಸೂಕ್ಷ್ಮವಾದ ಚಕ್ರವಿರಬೇಕು ಮತ್ತು ಮೈಮೇಲೆ ಬಂಗಾರ, ಬೆಳ್ಳಿಯ ರೇಖೆಗಳಿದ್ದರೆ ಅದು ಅನಿರುದ್ಧ ಮೂರ್ತಿ ಸಾಲಿಗ್ರಾಮವು.

### ಹಯಗ್ರೀವ ಮೂರ್ತಿ

ಅಂಕುಶಾಕಾರ ವದನಂ ದೀರ್ಘ ಬಿಂದು ಸಮುಜ್ವಲಮ್ ।
ಪಕ್ವಜಂಬೂ ಫಲಾಕಾರಂ ಹಯುಗ್ರೀವಂ ವದಂತ್ಯಹಮ್ ॥

ಮುಖವು ಅಂಕುಶಾಕಾರವಾಗಿದ್ದು, ಉದ್ದವಾದ ಬಿಂದುವುಳ್ಳ, ಪ್ರಕಾಶಮಾನವಾದಂಥ ಪಕ್ವವಾದ ನೀರಲ ಹಣ್ಣಿನಂತಿರುವದೇ ಹಯಗ್ರೀವ ಮೂರ್ತಿ ಸಾಲಿಗ್ರಾಮವು.

### ಶ್ರೀಧರ ಮೂರ್ತಿ

ಘನಶಾಡ್ ಬಲ ಸಂಕಾಶಂ ವನಮಾಲಾ ವಿಭೂಷಿತಂ ।
ಕಿಂಚಿದ್ವಿಷಮ ಚಕ್ರಾಢ್ಯಂ ಶ್ರೀಧರಂ ಶ್ರೀಕರಂವಿದುಃ ॥

ದಟ್ಟವಾದ ಹಸಿರು ಬಣ್ಣದ ಪ್ರಭೆಯುಳ್ಳ ವನಮಾಲಾ ವಿಭೂಷಿತವಾದ ಸ್ವಲ್ಪ ವಿಷಮ ಚಕ್ರವಿರುವದೇ ಶ್ರೀಧರ ಮೂರ್ತಿ ಸಾಲಿಗ್ರಾಮವು.

### ಲಕ್ಷ್ಮೀನಾರಾಯಣ ಮೂರ್ತಿ

ನಿಮ್ನಾಕಾರಂ ಶಿರಶ್ಚಕ್ರಂ ಸುವೃತ್ತಂ ಶೀತಲಾಕೃತಿ ।
ದ್ವಾರದ್ವಯೇ ಚತುಶ್ಚಕ್ರಂ ವಾಮೇವಾದಕ್ಷಿಣೇಪಿವಾ ॥
ಶ್ರೀವತ್ಸಶಂಖಚಕ್ರಾಢ್ಯಂ ಲಕ್ಷ್ಮೀನಾರಾಯಣಂವಿದುಃ ॥

ನಿಮ್ನ ಆಕಾರವುಳ್ಳ, ದುಂಡಗಿರುವ ಚಕ್ರವಿರುವ ಮತ್ತು ಬಲಗಡೆ ದ್ವಾರದಲ್ಲಿ ಎರಡು, ಎಡಗಡೆ ದ್ವಾರದಲ್ಲಿ ಎರಡು ಹೀಗೆ ನಾಲ್ಕು ಚಕ್ರಗಳಿರುವ ಹೃದಯದಲ್ಲಿ ಶ್ರೀವತ್ಸವುಳ್ಳ ಶಂಖ ಚಕ್ರವುಳ್ಳದ್ದೇ ಲಕ್ಷ್ಮೀನಾರಾಯಣ ಮೂರ್ತಿ ಸಾಲಿಗ್ರಾಮವು.

### ಪದ್ಮನಾಭ ಮೂರ್ತಿ

ನಾಭಿಚಕ್ರೋಲ್ಲ ಸತ್ ಪದ್ಮೋಜಂಬೂಫಲ ಸಮಪ್ರಭಃ ।
ಪದ್ಮನಾಭ ಇತಿಖ್ಯಾತ ಸ್ತಂಬಿದುರ್ನಾಕದಂ ಬುಧಾಃ ॥

ನಾಭಿ (ಹೊಕ್ಕಳ) ಪ್ರದೇಶದಲ್ಲಿ ಚಕ್ರವಿದ್ದು ಅದು ನೀರಲಹಣ್ಣಿನಂತೆ ಪ್ರಭೆಯುಳ್ಳದ್ದಾಗಿದ್ದರೆ ಅದು ಪದ್ಮನಾಭ ಮೂರ್ತಿ ಸಾಲಿಗ್ರಾಮವು. ಇದು ಸ್ವರ್ಗವನ್ನು ಕೊಡುವಂಥದು ಆಗಿದೆ.



### ಗೋವಿಂದ ಮೂರ್ತಿ

ನವದೂರ್ವಾ ದಲಶ್ಯಾಮೋವನ ಮಾಲಾವಿಭೂಷಿತಃ ।
ದಶರಂಧ್ರ ಸಮಾಯುಕ್ತೋ ವಿಂಶಚ್ಚಕ್ರ ಸಮನ್ವಿತಃ ॥
ಗೋವಿಂದ ಇತಿ ವಿಖ್ಯಾತಃ ಸರ್ವಕಾಮ ಫಲಪ್ರದಃ ॥

ಹೊಸ ಕರಿಕೆಯ ಎಲೆಯಂತೆ ಇದ್ದು ಶ್ಯಾಮವರ್ಣವಾಗಿದ್ದರೆ ಮತ್ತು ವನಮಾಲೆಯಿಂದ ವಿಭೂಷಿತವಾದ ಹತ್ತು ರಂಧ್ರಗಳ ಇಪ್ಪತ್ತು ಚಕ್ರಗಳಿದ್ದರೆ ಅದು ಗೋವಿಂದ ಮೂರ್ತಿಸಾಲಿಗ್ರಾಮವು.

### ವಿಶ್ವರೂಪ ಮೂರ್ತಿ

ಜ್ಞೇಯೋ ದ್ವಾದಶ ರಂಧ್ರಸ್ತು ಚತುರ್ವಿಂಶ ತಿಚಕ್ರಕಃ ।
ವಿಶ್ವರೂಪ ಇತಿಖ್ಯಾತೋ ಭಕ್ತಿ ಮುಕ್ತಿ ಫಲಪ್ರದಃ ॥

ಯಾವ ಸಾಲಿಗ್ರಾಮದಲ್ಲಿ ಹನ್ನೆರಡು ರಂಧ್ರಗಳು ಇಪ್ಪತ್ತು ನಾಲ್ಕು ಚಕ್ರಗಳು ಇದ್ದು ಅದು ಮುಕ್ತಿ ಫಲದಾಯಕವಾಗಿದ್ದರೆ ಅದು ವಿಶ್ವರೂಪ ಮೂರ್ತಿ ಸಾಲಿಗ್ರಾಮವು.

### ಅನಂತ ಮೂರ್ತಿ

ಶ್ರೀ ವತ್ಸ ಶಂಖ ಚಕ್ರಾಢ್ಯಂ ಪಂಚಾಯುಧ ಲಸತ್ ತನುಮ್ ।
ಸಮಂಸೂಕ್ಷ್ಮಂ ಲಸಚ್ಚಕ್ರಂ ಪಂಕಜದ್ವಯ ಶೋಭಿತಮ್ ॥
ಸದಾಶೀತಲ ತನುಮನಂತ ಮನಲೋ ಜ್ವಲಮ್ ॥

ಶಂಖ, ಚಕ್ರ, ಪಂಚಾಯುಧಗಳಿಂದ ಭೂಷಿತವಾದ, ಸೂಕ್ಷ್ಮ ಚಕ್ರವಿರುವ ಮತ್ತು ಎರಡು ಕಮಲಗಳ, ಹಾಗೂ ಯಾವಾಗಲೂ ಶೀತಲವಾಗಿರುವ ಸಾಲಿಗ್ರಾಮವು ಅನಂತ ಮೂರ್ತಿಸಾಲಿಗ್ರಾಮವು

### ಲಕ್ಷ್ಮೀನಾರಾಯಣ ಮೂರ್ತಿ

ದ್ವಾರ ದೇಶೇ ಲಸ ದ್ರೇಖಂಪಕ್ಷಿರಾಜ ಸುರೇಖಕಂ ।
ಲಕ್ಷ್ಮೀನಾರಾಯಣಂ ಪ್ರಾಹುಃ ದುರ್ಲಭಂ ಶೀಘ್ರ ಸಿದ್ಧಿದಂ ॥

ದ್ವಾರದಲ್ಲಿ ಗರುಡನ ಆಕಾರದ ರೇಖೆ ಇದ್ದು ಶೀಘ್ರವಾಗಿ ಫಲ ಕೊಡುವಂಥದೇ ಲಕ್ಷ್ಮೀ ನಾರಾಯಣ ಮೂರ್ತಿ ಸಾಲಿಗ್ರಾಮವು ಇದ ಸುಲಭವಾಗಿ ದೊರಕುವದಿಲ್ಲ.

**ನಾರಾಯಣ ಮೂರ್ತಿ**

ಉಕ್ತ ಲಕ್ಷಣ ಸಂಯುಕ್ತಂ ಶೇಷ ಭೋಗೇನ ವೇಷ್ಟಿತಮ್ ।
ನಾರಾಯಣಮಿ ಮಂಪ್ರಾಹು ರ್ನಾರದೇಷ್ಟ ಫಲ ಪ್ರದಮ್ ।।

ಆದಿಶೇಷನಿಂದ ಸುತ್ತುವರಿಯಲ್ಪಟ್ಟ ಸುಲಕ್ಷಣವುಳ್ಳ ಮತ್ತು ಬೇಡಿದ ಇಷ್ಟಾರ್ಥಗಳನ್ನು ಕೊಡತಕ್ಕ ಸಾಲಿಗ್ರಾಮವೇ ನಾರಾಯಣ ಮೂರ್ತಿ ಸಾಲಿಗ್ರಾಮವು.

**ದಾಮೋದರ ಮೂರ್ತಿ**

ಕಿಂಚಿದ್ವಿಷಮ ಚಕ್ರಾಢ್ಯ ಮಿಂದ್ರ ನೀಲ ಸಮಪ್ರಭಮ್ ।
ವನಮಾಲಾ ಲಸಚ್ಚಕ್ರಂ ಪ್ರಾಹು ರ್ದಾಮೋದರಂ ಮುನೇ ।।

ವಿಷಮ ಚಕ್ರಗಳುಳ್ಳದ್ದೂ, ಇಂದ್ರ ನೀಲದಂತೆ ಪ್ರಕಾಶಿಸುವಂಥದೂ, ಕಮಲದಂತಹ ಚಕ್ರವುಳ್ಳ ಸಾಲಿಗ್ರಾಮವು ದಾಮೋದರ ಮೂರ್ತಿ ಸಾಲಿಗ್ರಾಮವು.

**ಅನಂತ ಮೂರ್ತಿ**

ನಾನಾವರ್ಣ ಸಮಾಯುಕ್ತೋ ನಾಗವೇಷ್ಟನ ಸನ್ನಿಭಃ ।
ಅನಂತ ಮೂರ್ತಿ ರ್ವಿಜ್ಞೇಯೋಹರಿಃ ಲಕ್ಷ್ಮೀ ಪ್ರದಾಯಕಃ ।।

ಅನೇಕ ಬಣ್ಣಗಳಿಂದ ಕೂಡಿರುವ, ಸರ್ಪನಿಂದ ಸುತ್ತುವರಿಯಲ್ಪಟ್ಟ ಸಂಪತ್ತನ್ನು ಕೊಡತಕ್ಕ ಸಾಲಿಗ್ರಾಮವು ಅನಂತ ಮೂರ್ತಿಸಾಲಿ ಗ್ರಾಮವು.

**ತ್ರಿವಿಕ್ರಮ ಮೂರ್ತಿ**

ದೀರ್ಘಾಕಾರೋ ಮಹಾತೇಜಾಃ ಶಂಖ ಚಕ್ರ ಗದಾಂಕವಾನ್ ।
ವನಮಾಲಾ ಧರ ಶ್ರೀಮಾನ್ ತ್ರಿವಿಕ್ರಮ ಉದಾಹೃತಃ ।।

ದೀರ್ಘವಾದ ಆಕಾರವುಳ್ಳ, ಅಧಿಕತೇಜಸ್ಸುಳ್ಳ ಮತ್ತು ಶಂಖ,ಚಕ್ರ, ಗದಾಚಿಹ್ನಗಳುಳ್ಳ ಸಾಲಿಗ್ರಾಮವು ತ್ರಿವಿಕ್ರಮ ಮೂರ್ತಿ ಸಾಲಿಗ್ರಾಮವು.

**ಜನಾರ್ದನ ಮೂರ್ತಿ**

ಶಂಖ ಚಕ್ರಾಬ್ಜಮಾಲಾಂಕೋ ನೀಲ ಶ್ಯಾಲಾಕೃತಿಶ್ಶುಭಃ ।
ಜನಾರ್ದನ ಇತಿಖ್ಯಾತೋ ಹಿಮಾಂಶು ಪರಿಶೀತಲಃ ।।



ಶಂಖ, ಚಕ್ರ, ಕಮಲಮಾಲಾ ಚಿಹ್ನೆಗಳುಳ್ಳ, ಚಂದ್ರನಂತೆ ಬಹಳ ಶೀತಲವಾದ, ನೀಲ ವರ್ಣದ ಹಾಗೂ ಶೂಲಆಯುಧ ಸಹಿತವಾದ ಶುಭಕರವಾದ ಸಾಲಿಗ್ರಾಮವು ಜನಾರ್ದನ ಮೂರ್ತಿ ಸಾಲಿಗ್ರಾಮವು

**ವಾಸುದೇವ ಮೂರ್ತಿ**

ರೇಖಾ ಪಂಚಾಯುಧ ಧರೋ ಹಿಮಾಂಶು ಸದೃಶಪ್ರಭಃ
ನಾಭಿ ಚಕ್ರ ಧರಶ್ಶಾಂತೋವಾಸುದೇವ ಇತೀರಿತಃ ।।

ಐದು ಆಯುಧಗಳ ರೇಖೆಗಳುಳ್ಳ, ಚಂದ್ರನಂತೆ ಪ್ರಕಾಶಮಾನವಾದ, ನಾಭಿಯಲ್ಲಿ ಚಕ್ರವಿರುವ ಸಾಲಿಗ್ರಾಮವು ವಾಸುದೇವ ಮೂರ್ತಿ ಸಾಲಿಗ್ರಾಮವು

**ವಿಷ್ಣು ಮೂರ್ತಿ**

ವಿಷ್ಣು ಕ್ರಾಂತ ನಿಭಾ ಕಾರೋವನಮಾಲಾಬ್ಜ ಚಿಹ್ನಕಃ ।
ಪಂಚಾಯುಧ ಧರ ಶ್ರೀಮಾನ್ ವಿಷ್ಣು ರಿತ್ಯುಚ್ಯತೇ ಬುಧೈಃ ।।

ಬಿಳಿಯ ಬಣ್ಣದವನಸ್ಪತಿ ಸದೃಶವಾದ ಪಂಚ ಆಯುಧಗಳನ್ನು ಧರಿಸಿದ, ಕಮಲದ ಚಿಹ್ನವುಳ್ಳ ವನಮಾಲಾ ವಿಭೂಷಿತವಾದ ಸಾಲಿಗ್ರಾಮವು ಲಕ್ಷ್ಮೀ ಸಹಿತವಾದ ಶ್ರೀ ವಿಷ್ಣು ಮೂರ್ತಿ ಸಾಲಿಗ್ರಾಮವು.

**ಅಚ್ಯುತ ಮೂರ್ತಿ**

ನೀಲಸ್ಥೂಲ ಸಮಾಕಾರೋ ವನಮಾಲಾ ವಿಭೂಷಿತಃ ।
ಸೂಕ್ಷ್ಮ ಚಕ್ರ ಸ್ಸಮ ಶ್ಯಾಕ್ಷ್ಣೋ ಹ್ಯಚ್ಯುತ ಸ್ಸಮುದೀರಿತಃ ।

ನೀಲವರ್ಣದಿಂದ ಸುಶೋಭಿತವಾದ, ಸ್ಥೂಲವಾಗಿರುವ ವನಮಾಲಾ ವಿಭೂಷಿತವಾದ ಸೂಕ್ಷ್ಮ ಚಕ್ರದಿಂದ ಕೂಡಿರುವ ಲಕ್ಷಣಗಳುಳ್ಳ ಸಾಲಿಗ್ರಾಮವು ಅಚ್ಯುತಸಾಲಿಗ್ರಾಮವು.

**ಉಪೇಂದ್ರ ಮೂರ್ತಿ**

ಶಂಖ ಚಕ್ರಗದಾಚಿಹ್ನಾ ನೀಲ ವರ್ಣೋಲ ಸತ್ತನುಃ ।
ಉಪೇಂದ್ರ ಮೂರ್ತಿಃ ವಿಖ್ಯಾತಾ ಹರೇಃ ಸ್ಸೌಖ್ಯ ಶುಭಪ್ರದಾ ।।

ಶಂಖ, ಚಕ್ರ, ಗದಾ ಚಿಹ್ನೆಗಳುಳ್ಳ, ನೀಲಿಬಣ್ಣದಿಂದ ಶೋಭಿಸುವ ದೇಹವುಳ್ಳ ಉಪೇಂದ್ರ ಮೂರ್ತಿ ಸಾಲಿಗ್ರಾಮವು. ಇದು ಶುಭ ಪ್ರದವಾದ ಸೌಖ್ಯ ಕರವಾದ ಸಾಲಿಗ್ರಾಮವು ಸೌಖ್ಯಪ್ರದವಾದದ್ದು.

**ಶಿವನಾಭ ಮೂರ್ತಿ**

ಗಜವೃತ್ತಾ ಸ್ಥೂಲರೇಖಾ ದೃಶ್ಯತೇಯ ಸ್ಯಮಧ್ಯತಃ |
ಶಿವನಾಭ ಸ್ಸವಿಜ್ಞೇಯೋ ದುರ್ಲಭ ಸ್ಸರ್ವಕಾಮದಃ ||

ಗಜದಂತೆ ಸ್ಥೂಲವಾದರೇಖೆಯು ಮಧ್ಯದಲ್ಲಿದ್ದು ಎಲ್ಲ ಅಪೇಕ್ಷೆಗಳನ್ನು ಸಿದ್ಧಿ ಮಾಡಿಕೊಡುವ ಸಾಲಿಗ್ರಾಮವು ಶಿವನಾಭ ಮೂರ್ತಿ ಸಾಲಿಗ್ರಾಮವು. ಇದು ಸಿಗುವದು ಬಹುದುರ್ಲಭ

**ಹಿರಣ್ಯ ಗರ್ಭ ಮೂರ್ತಿ**

ದ್ವಾರಂನ ದೃಶ್ಯತೇ ಯಸ್ಯ ನೀಲವರ್ಣ ಸ್ಸುಶೀತಲಃ |
ಹಿರಣ್ಯಗರ್ಭಃ ಖ್ಯಾತೋ ಸೌ ಹೇಮ ಗರ್ಭಃ ಶುಭಪ್ರದಃ ||

ನೀಲಿಬಣ್ಣದ, ಶೀತಲವಾದ ಮತ್ತು ದ್ವಾರವು ಸರಿಯಾಗಿ ಕಾಣದಿರುವ ಶುಭ ಪ್ರದವಾದ ಹೇಮಗರ್ಭದ ಸಾಲಿಗ್ರಾಮವು ಹಿರಣ್ಯ ಗರ್ಭ ಮೂರ್ತಿ ಸಾಲಿಗ್ರಾಮವು.

**ಮದನ ಗೋಪಾಲ ಮೂರ್ತಿ**

ಅರ್ಧ ಶ್ಯಾಮೋರ್ಧ ರಕ್ತ ಶ್ಚ ಶಂಖ ಚಕ್ರ ಧನು ಶ್ಶರೀ |
ದೀರ್ಘಃ ಸುಷಿರವಾನ್ ವಾಮೇ ಗೋಪಾಲೋಮದ ನಾಹ್ವಯಃ||

ಸಾಲಿಗ್ರಾಮದ ಅರ್ಧಭಾಗವು ಶ್ಯಾಮವರ್ಣವು, ಅರ್ಧಭಾಗವು ಕೆಂಪು ಬಣ್ಣವಿದ್ದು ಶಂಖ, ಚಕ್ರ, ಧನಸ್ಸು, ಬಾಣವುಳ್ಳ, ದೀರ್ಘವಾದ ರಂಧ್ರವು ಎಡಗಡೆಯಲ್ಲಿರುವ ಸಾಲಿಗ್ರಾಮವು ಮದನ ಗೋಪಾಲ ಮೂರ್ತಿ ಸಾಲಿಗ್ರಾಮವು

**ಜನಾರ್ದನ ಮೂರ್ತಿ**

ಅಂತರ್ಲಕ್ಷ್ಮ್ಯ ಚತುಶ್ಚಕ್ರಂ ಶೀತಲಂ ಚೋತ್ಪಲ ಪ್ರಭಮ್ |
ಜನಾರ್ದನಂ ವಿಜಾನಂತಿ ವನಮಾಲಾಭಿ ಭೂಷಿತಮ್ ||



(ಪ್ರಕಾರಾಂತರಂ)

ದ್ವಾರಪಟ್ಟೆ ಸಮಾಯುಕ್ತಂ ಚಕ್ರದ್ವಾದಶ ಕೋಜ್ವಲಂ |
ವನಮಾಲಾಯುತಂ ಶ್ಲಕ್ಷ್ಣ ಮಾಹುಸ್ತಂಚ ಜನಾರ್ದನಂ ||

ನಾಲ್ಕು ಚಕ್ರಗಳಿರುವ, ಅಂತರ್ಲಕ್ಷ್ಮ್ಯವಿರುವ, ಶೀತಲವಾಗಿರುವ, ಕಮಲದ ಪ್ರಭೆಯುಳ್ಳ ವನಮಾಲಾ ವಿಭೂಷಿತವಾದ ಸಾಲಿಗ್ರಾಮವು ಜನಾರ್ದನ ಮೂರ್ತಿ ಸಾಲಿಗ್ರಾಮವು.

(ಪ್ರಕಾರಾಂತರಂ)

ಆರು ದ್ವಾರಗಳಿಂದ ಕೂಡಿರುವ, ಉಜ್ವಲವಾದ ಹನ್ನೆರಡು ಚಕ್ರಗಳಿರುವ ವನಮಾಲಾಯುಕ್ತವಾಗಿರುವ ಸೂಕ್ಷ್ಮವಾದ ಸಾಲಿಗ್ರಾಮವು ಜನಾರ್ದನ ಮೂರ್ತಿ ಸಾಲಿಗ್ರಾಮವು

**ಲಕ್ಷ್ಮೀ ನಾರಾಯಣ ಮೂರ್ತಿ**

ದ್ವೇ ದ್ವೇ ಚಕ್ರೇತ್ವಧಶ್ಚೋರ್ಧ್ವಂ ಲಕ್ಷ್ಮೀನಾರಾಯಣ ಸ್ಮೃತಃ ||

ಎರಡು ಚಕ್ರಗಳು ಮೇಲೆ, ಎರಡು ಚಕ್ರಗಳುಕೆಳಗೆ ಇರುವ ಸಾಲಿಗ್ರಾಮವು ಲಕ್ಷ್ಮೀನಾರಾಯಣ ಸಾಲಿಗ್ರಾಮವು

**ಶ್ರೀಮನ್ನಾರಾಯಣ ಮೂರ್ತಿ**

ದ್ವೇದ್ವೇ ಚಕ್ರೇ ಚಪಾರ್ಶ್ವಸ್ಥೇ ಶ್ರೀಮನ್ನಾರಾಯಣಃ ಸ್ಮೃತಃ ||

ಎರಡೂಬದಿಗಳಲ್ಲಿ (ಪಾರ್ಶ್ವ) ಎರಡೆರಡು ಚಕ್ರಗಳುಳ್ಳ ಸಾಲಿಗ್ರಾಮವು ಶ್ರೀಮನ್ನಾರಾಯಣ ಮೂರ್ತಿ ಸಾಲಿಗ್ರಾಮವು.

**ಸುದರ್ಶನ ಮೂರ್ತಿ**

ವೃತ್ತಾಕಾರಂತು ದೀರ್ಘಂವಾ ದ್ವಾರ ದೃಷ್ಟೈಕ ಚಕ್ರಕಮ್ |
ಸುದರ್ಶನಂ ವಿಜಾನಂತಿ ಬಿಂದುಯುಕ್ತಂ ವಿಚಕ್ಷಣಾಃ ||

**ಪ್ರಕಾರಾಂತರಂ**

ಚಕ್ರದ್ವಯಂ ಖಿಲೇನಸ್ತಃ ಯಸ್ಯ ಮೂರ್ಧ್ನಿಸುದರ್ಶನಮ್ |
ರಕ್ತ ಮೂರ್ಧ್ನ ವಿತಿಪ್ರಾಹುಃ ಮಹೋಗ್ರಂ ಯತಿಪೂಜನೇ ||

ವೃತ್ತಾಕಾರ ಅಥವಾ ದೀರ್ಘಾಕಾರವಾಗಿರುವ ದ್ವಾರವುಳ್ಳ ಮತ್ತು ಒಂದು ಚಕ್ರವಿರುವ, ಬಿಂದುಯುಕ್ತವಾಗಿರುವ ಸಾಲಿಗ್ರಾಮವು ಸುದರ್ಶನ ಮೂರ್ತಿ ಸಾಲಿಗ್ರಾಮವು ಇದು ಯತಿಗಳ ಪೂಜೆಗೆ ಶ್ರೇಷ್ಠವಾದದ್ದು ಮೂರ್ಧ್ನಿಸ್ಥಾನದಲ್ಲಿ ಎರಡು ಚಕ್ರಗಳಿರುವ, ಮೇಲ್ಭಾಗದಲ್ಲಿ ರಕ್ತ ವರ್ಣವಿರುವ ಸುದರ್ಶನ ಸಾಲಿಗ್ರಾಮವು ಯತಿಗಳ ಪೂಜೆಗೆ ಶ್ರೇಷ್ಠವಾಗಿರುವದು.

### ವನಮಾಲಿ ಮೂರ್ತಿ

ಬಿಲ ಪಾರ್ಶ್ವಸ್ಥ ದಂಷ್ಟ್ರಾಂಕ ಮಂತಶ್ಚಕ್ರ ದ್ವಯೋ ಜ್ವಲತ್ |
ಕಪಿಲಂ ವಕ್ರವದನಂತತ್ ಪಾರ್ಶ್ವೇ ವನಮಾಲಿನಮ್ ||

ಬಿಲ (ತೂತು)ದ ಎರಡೂ ಕಡೆಗಳಲ್ಲಿ ಕೋರೆದಾಡೆಗಳ ಗುರ್ತುಗಳಿದ್ದು, ಎರಡು ಚಕ್ರಗಳಿರುವ, ಕಪಿಲ ಬಣ್ಣದ ವಕ್ರವಾದ (ಸೊಟ್ಟಾದ)ದ ಮುಖವುಳ್ಳ ಸಾಲಿಗ್ರಾಮವು ವನಮಾಲಿ ಸಾಲಿಗ್ರಾಮವು.

### ಮಹಾಜ್ವಾಲಾ ನೃಸಿಂಹ ಮೂರ್ತಿ

ಸ್ಥೂಲಂಚ ವಿನ್ಯತಾಸ್ಯಂಚ ನೀಲಂವಾಕಪಿಲಂ ಪೃಥುಮ್ |
ಮಹಾಜ್ವಾಲಾ ನೃಸಿಂಹಂತಂ ಯತಿಪೂಜ್ಯಂ ಮಹಾಮುನೇ ||

ದಪ್ಪವಾಗಿರುವ, ತೆರೆದ ಬಾಯಿಯುಳ್ಳ ನೀಲಿಬಣ್ಣ ಅಥವಾ (ಕಪಿಲ) ಕಪ್ಪುಮಿಶ್ರಮಾಸ ಬಣ್ಣವಿದ್ದು ದೊಡ್ಡದಾದ ಸಾಲಿಗ್ರಾಮವು ಮಹಾಜ್ವಾಲಾ ನೃಸಿಂಹ ಮೂರ್ತಿ ಸಾಲಿಗ್ರಾಮವು. ಇದು ಯತಿಗಳ ಪೂಜೆಗೆ ಯೋಗ್ಯವಾದದ್ದು.

### ಶಿವನಾಭ ಮೂರ್ತಿ

ಊರ್ಧ್ವರಂಧ್ರಂ ಲಸಲ್ಲಿಂಗಂ ಸುವೃತ್ತಂ ಶೀತಲಾ ಕೃತಿಂ |
ಶ್ರೀಕರಂ ಶಿವನಾಭಾಖ್ಯಂ ಸರ್ವಸೌಭಾಗ್ಯ ವರ್ಧನಂ ||

ರಂಧ್ರವು ಮೇಲ್ಮುಖವಾಗಿರುವ ಮತ್ತು ಲಿಂಗವು ವೃತ್ತಾಕಾರವಾಗಿರುವ ಶೀತಲವಾಗಿರುವ ಸರ್ವಸ-ಭಾಗ್ಯಗಳನ್ನು ವೃದ್ಧಿಪಡಿಸತಕ್ಕ ಸಾಲಿಗ್ರಾಮವು ಶಿವನಾಭ ಸಾಲಿಗ್ರಾಮವು.

### ಬುದ್ಧ ಮೂರ್ತಿ

ರಂಧ್ರೇಸ್ಪ ದೃಷ್ಟಚಕ್ರಂ ಚಂಪಕಾಕಾರಂ ಸಬಿಂದುಕಮ್ |
ಬುದ್ಧಾಕಾರಂ ವಿಜಾನೀಯಾಚ್ಚಕ್ರಂ ವಾ ಮಲಿನಾವಹಮ್ ||

ರಂಧ್ರದಲ್ಲಿ ಅಸ್ಪಷ್ಟವಾಗಿ ಕಾಣಿಸುವ ಚಕ್ರವು ಸಂಪಿಗೆ ಹೂವಿನ ಆಕಾರವುಳ್ಳ, ಅಸ್ಪಷ್ಟವಾದ ಚಕ್ರವುಳ್ಳ ಹಾಗೂ ಬಿಂದುಗಳುಳ್ಳ ಬುದ್ಧನಾಕಾರ ಮೂರ್ತಿಯ ಸಾಲಿಗ್ರಾಮವು ಬುದ್ಧ ಸಾಲಿಗ್ರಾಮವು.



### ಲಕ್ಷ್ಮೀನೃಸಿಂಹ ಮೂರ್ತಿ

ಮಹಚ್ಚಕ್ರಾಂತಿ ಕಲಸತ್ ಸೂಕ್ಷ್ಮಚಕ್ರ ಬಿಲಾಂತರಮ್ |
ಲಕ್ಷ್ಮೀನೃಸಿಂಹಂ ಕಪಿಲಂ ವರ್ಣತಃ ಕ್ಷೇತ್ರಭಾವನಾ ||

ರಂಧ್ರದ ಸಮೀಪದಲ್ಲಿ ಸೂಕ್ಷ್ಮವಾದ ಚಕ್ರವುಳ್ಳ, (ಕಪಿಲ) ಸ್ವಲ್ಪ ಕಪ್ಪು ಮಾಸ ಬಣ್ಣವುಳ್ಳ ಮತ್ತು ದೊಡ್ಡ ಚಕ್ರವುಳ್ಳ ಕ್ಷೇತ್ರದಲ್ಲಿ ಭಕ್ತಿಯ ಕೇಂದ್ರವಾಗತಕ್ಕ ಸಾಲಿಗ್ರಾಮವು ಲಕ್ಷ್ಮೀನೃಸಿಂಹ ಮೂರ್ತಿ ಸಾಲಿಗ್ರಾಮವು.

### ಶ್ವೇತವಾರಾಹ ಮೂರ್ತಿ

ದೀರ್ಘಘೋಣ ಸಮಾಯುಕ್ತ ಮೇಕದಂಷ್ಟ್ರಂ ಸುನಿರ್ಮಲಂ |
ವನಮಾಲಾಯುತಂರಮ್ಯಂ ಶ್ವೇತಂ ವಾರಾಹ ಮುಚ್ಯತೇ ||

ಉದ್ದವಾದ ನಾಸಿಕವಿರುವ, ನಿರ್ಮಲವಾದ ಒಂದು ಕೋರೆದಾಡೆ ಇರುವ ಸ್ವಚ್ಛವಾಗಿರುವ ವನಮಾಲಾ ವಿಭೂಷಿತವಾದ ರಮ್ಯವಾದ ಸಾಲಿಗ್ರಾಮವು ಶ್ವೇತವಾರಾಹ ಮೂರ್ತಿ ಸಾಲಿಗ್ರಾಮವು.

### ಭೂವರಾಹ ಮೂರ್ತಿ

ಅಧಃಚಕ್ರಾಂತಿಕಲಸದೇಕದಂಷ್ಟ್ರಂ ಸಮುಚ್ಛಿತಮ್ |
ಅಂಕುಶಾಕಾರ ವದನಂ ಭೂವರಾಹಂ ಶುಭಪ್ರದಮ್ ||

ಕೆಳಭಾಗದಲ್ಲಿ ಚಕ್ರದ ಗುರುತು ಇರುವ, ಒಂದು ಕೋರೆದಾಡೆ ಇರುವ ಮತ್ತು ಅಂಕುಶದಾಕಾರದ ಮುಖವುಳ್ಳ ಸಾಲಿಗ್ರಾಮವು ಭೂವರಾಹ ಮೂರ್ತಿ ಸಾಲಿಗ್ರಾಮವು ಇದು ಶುಭಪ್ರದವಾದದ್ದು.

### ಕೂರ್ಮ ಮೂರ್ತಿ

ಸ್ಥೂಲಂಚ ನಿಬಿಡಾಕಾರಂ ಶ್ಯಾಮ ವರ್ಣಂ ಸಚಕ್ರಕಮ್ |
ಕರ್ಬುರಂ ವಾಥ ಕಪಿಲಂ ಶ್ಯಾಮಂ ಕೂರ್ಮವಿದುರ್ಬುಧಾಃ ||

ದಪ್ಪವಾಗಿರುವ, ನಿಬಿಡಾ (ಗಟ್ಟಿಯಾಗಿರುವ) ಕಾರವಾಗಿರುವ, ಕಪ್ಪು ಬಣ್ಣದ, ಚಕ್ರಸಹಿತವಾದ ಚಿತ್ರವಿಚಿತ್ರವಾದ ಬಣ್ಣ, ಕಪಿಲ (ಮಾಸ) ಬಣ್ಣದ ಅಥವಾ ಶ್ಯಾಮವರ್ಣದ ಸಾಲಿಗ್ರಾಮವು ಕೂರ್ಮ ಮೂರ್ತಿ ಸಾಲಿಗ್ರಾಮವು.

## ಹೃಷಿಕೇಶ ಮೂರ್ತಿ

ಪಂಚರಂಧ್ರ ಸಮಾಯುಕ್ತಂ ದಶಚಕ್ರ ಸಮನ್ವಿತಮ್ |
ಶಾಮಲಂ ಕೋಮಲಾಕಾರಂ ಹೃಷೀಕೇಶಂ ಪ್ರಚಕ್ಷತೇ ||

ಐದು ರಂಧ್ರಗಳುಳ್ಳ, ಹತ್ತು ಚಕ್ರಗಳುಳ್ಳ, ಶ್ಯಾಮಲವರ್ಣದ, ಕೋಮಲಾಕಾರದ ಸಾಲಿಗ್ರಾಮವು ಹೃಷಿಕೇಶ ಮೂರ್ತಿ ಸಾಲಿಗ್ರಾಮವು.

## ಕೇಶವ ಮೂರ್ತಿ

ರಾಜತ್ಯೈರ್ಬಿಂದುಭಿಃ ಹೈರ್ಮ್ಯೈರಾನ್ವಿತಂ ಸೂಕ್ಷ್ಮಚಕ್ರಕಂ |
ವನಮಾಲಾನ್ವಿತಂ ಶ್ಯಾಮಂ ಕೇಶವಾಖ್ಯಂ ವಿದುರ್ಬುಧಾಃ ||

ಹೊಳೆಯತಕ್ಕ ಹೇಮಗರ್ಭ ಬಿಂದುಗಳಿಂದ ಶೋಭಿಸತಕ್ಕ ಮತ್ತು ಸೂಕ್ಷ್ಮವಾದ ಚಿತ್ರಗಳಿರುವ, ವನಮಾಲಾ ವಿಭೂಷಿತವಾದ ಶಾಮವರ್ಣದ ಸಾಲಿಗ್ರಾಮವು ಕೇಶವ ಮೂರ್ತಿ ಸಾಲಿಗ್ರಾಮವು.

## ಅಚ್ಯುತ ಮೂರ್ತಿ

ಬಹಿಶ್ಚಕ್ರ ಸಮಾಯುಕ್ತ ಮಂತಶ್ಚಕ್ರ ದ್ವಯಾನ್ವಿತಂ |
ಮೂರ್ತಂ ತಮಚ್ಯುತಂ ಜ್ಞೇಯಂ ಸೂಕ್ಷ್ಮರಂಧ್ರಂ ಸುಶೀತಲಂ ||

ಹೊರಗೆ ಒಂದು ಚಕ್ರವಿರುವ ಮತ್ತು ಒಳಭಾಗದಲ್ಲಿ ಎರಡು ಚಕ್ರಗಳಿರುವ, ಸೂಕ್ಷ್ಮವಾದ ರಂಧ್ರ ಇರುವ, ಸುಶೀತಲವಾದ ಸಾಲಿಗ್ರಾಮವು ಅಚ್ಯುತ ಮೂರ್ತಿ ಸಾಲಿಗ್ರಾಮವು.

## ವೈಕುಂಠ ಮೂರ್ತಿ

ರೇಖಾಷ್ಟಕಾಯುಧೋಪೇತಂ ಪದ್ಮನೀಕಾಶಗಹ್ವರಂ |
ವನಮಾಲಾನ್ವಿತಂ ಶ್ಯಾಮಂ ವೈಕುಂಠಂ ಕೋಮಲಂವಿದುಃ ||

ಎಂಟು ರೇಖೆಗಳು ಮತ್ತು ಆಯುಧ ಸಮೇತವಾಗಿರುವ ಹಾಗೂ ಒಳಭಾಗದಲ್ಲಿ ಕಮಲವಿರುವ ವನಮಾಲಾ ವಿಭೂಷಿತವಾದ ಕೋಮಲವಾದ ಶ್ಯಾಮವರ್ಣದ ಸಾಲಿಗ್ರಾಮವು ವೈಕುಂಠ ಮೂರ್ತಿ ಸಾಲಿಗ್ರಾಮವು.



## ವಿಷ್ವಕ್ಶ್ರವೋ ಮೂರ್ತಿ

ಪಾರ್ಶ್ವರಂಧ್ರ ದ್ವಯೋಪೇತಂ ವನಮಾಲಾಭಿವೇಷ್ಟಿತಂ |
ವಿಷ್ವರ ಶ್ರವ ಸಂಪ್ರಾಹು ಸ್ಥೂಲಂ ದೀರ್ಘಂಚ ಚಕ್ರಿಣಂ ||

ಎರಡೂ ಬದಿಗಳಲ್ಲಿ ಎರಡು ರಂಧ್ರಗಳಿರುವ ದಪ್ಪವೂ, ದೀರ್ಘಾಕಾರವೂ ಆದ ಚಕ್ರವಿರುವ ವನಮಾಲಾ ವಿಭೂಷಿತವಾದ ಸಾಲಿಗ್ರಾಮವು ವಿಷ್ವಂಶ್ರವ ಮೂರ್ತಿ ಸಾಲಿಗ್ರಾಮವು

## ಹಿರಣ್ಯಗರ್ಭ ಮೂರ್ತಿ

ಹಿಮಾಂಶು ಸದೃಶಾಕಾರಂ ಶ್ಲಷ್ಣಂ ಸ್ಥೂಲಂ ತಥೋಚ್ಛ್ರಿತಂ |
ಹಿರಣ್ಯಗರ್ಭ ಮಾಹುಸ್ತಂ ದ್ವಾರದೃಷ್ಟ ಸುದರ್ಶನಂ ||

ಚಂದ್ರನ ಆಕಾರದಂತಿರುವ, ದಪ್ಪವಾಗಿರುವ ಮತ್ತು ರಂಧ್ರವು ಚಕ್ರದಂತೆ ಕಾಣಿಸುವ ಸಾಲಿಗ್ರಾಮವು ಹಿರಣ್ಯಗರ್ಭ ಮೂರ್ತಿ ಸಾಲಿಗ್ರಾಮವು.

## ಹರಿಹರಬ್ರಹ್ಮ ಮೂರ್ತಿ

ಶಂಖಚಕ್ರಾಹಿಕಮಲ ಕಮಂಡಲು ಪರಶ್ವಧೈಃ |
ಮಾಲಾತ್ರಯೇಣ ಸಂಯುಕ್ತಂ ಮೂರ್ತಿತ್ರಯ ವಿದಂವಿದುಃ ||

ಶಂಖ, ಚಕ್ರ, ಸರ್ಪಕಮಲ ಕಮಂಡಲು, ಕೊಡಲಿಗಳನ್ನು ಧರಿಸಿ ಮೂರು ಮಾಲೆಗಳನ್ನು ಧರಿಸಿರುವ ಮೂರು ಮೂರ್ತಿಗಳಿರುವ ಸಾಲಿಗ್ರಾಮವು ಹರಿಹರಬ್ರಹ್ಮ ಮೂರ್ತಿ ಸಾಲಿಗ್ರಾಮವು.

## ಕೂರ್ಮವರಾಹ ಮೂರ್ತಿ

ಬಿಂದುದ್ವಯ ಸಮಾಯುಕ್ತ ಚಕ್ರಂವಾಶಂಖಲಾಂಛನಮ್ |
ವಿಷ್ಣು ಲಕ್ಷಣ ಮಾಸ್ಯಂ ಚಾಪ್ಯಾಸ್ಯಚಕ್ರಂ ಸಮೀಪ ಗಂ ||
ತತ್ತಲ್ಲಕ್ಷಣ ಸಂಯುಕ್ತಂ ಭಾನೋರ್ವಿಮಲ ಪಂಚಕಮ್ |
ಕೂರ್ಮ ಮೂರ್ತಿರ್ವರಾಹಶ್ಚ ದುರ್ಲಭಂ ಸರ್ವಕಾಮದಂ ||

ಎರಡು ಬಿಂದುಗಳಿರುವ, ಶಂಖ ಅಥವಾ ಚಕ್ರವಿರುವ, ವಿಷ್ಣುವಿನ ಆಕಾರದ ಮುಖವುಳ್ಳ ಮತ್ತು ಮುಖದ ಸಮೀಪದಲ್ಲಿಯೇ ಚಕ್ರವಿರುವ

ಈ ಎಲ್ಲ ಲಕ್ಷಣಗಳಿಂದ ಕೂಡಿರುವ ಕೂರ್ಮವರಾಹ ಮೂರ್ತಿ ಸಾಲಿಗ್ರಾಮವು ಸಿಗುವದು ಬಹು ದುರ್ಲಭವು. ಇದು ಪೂಜಕರ ಸರ್ವಕಾಮನೆಗಳನ್ನು ಪೂರೈಸುವದು.

### ಮತ್ಸ್ಯ ಮೂರ್ತಿ

ಮತ್ಸ್ಯಾಕಾರಂ ಮಹಾಸ್ನಿಗ್ಧಂ ಬಿಂದು ನೋಪರಿ ಭೂಷಿತಂ |
ದಂಷ್ಟ್ರೀವಾ ಶಕ್ತಿಲಿಂಗಂಚ ವಕ್ತ್ರೇತು ವಿಷಮಸ್ಥಿತೇ ||

ಮೀನದ ಆಕಾರದ ಅಧಿಕಸ್ನಿಗ್ಧತೆಯುಳ್ಳ, ಬಿಂದುವಿನಿಂದ ಕೂಡಿದ, ವಿಷಮವಾದ (ಸೊಟ್ಟ) ಮುಖವುಳ್ಳ ಸಾಲಿಗ್ರಾಮವು ಮತ್ಸ್ಯ ಮೂರ್ತಿ ಸಾಲಿಗ್ರಾಮವು.

### ವರಾಹ ಮೂರ್ತಿ

ಇಂದ್ರನೀಲನಿಭಾ ಸ್ಥೂಲಾ ತ್ರಿರೇಖಾ ಲಾಂಛಿತಾ ಶುಭಾ |
ವರಾಹಮೂರ್ತಿರ್ವಿಜ್ಞೇಯಾ ಸರ್ವಕಾಮ ಫಲಪ್ರದಾ ||

ಇಂದ್ರ ನೀಲಬಣ್ಣದ ಸ್ಥೂಲವಾಗಿರುವ, ಮೂರು ರೇಖೆಗಳಿಂದ ಕೂಡಿರುವ ಎಲ್ಲ ಇಚ್ಛೆಗಳನ್ನು ಪೂರ್ಣಗೊಳಿಸುವ ಸಾಲಿಗ್ರಾಮವು ವರಾಹ ಮೂರ್ತಿ ಸಾಲಿಗ್ರಾಮವು.

### ಕಪಿಲಾನಾರಸಿಂಹ ಮೂರ್ತಿ

ಕಪಿಲಾನಾರಸಿಂಹಂತು ದಂಷ್ಟ್ರೀವಾ ಸ್ಥೂಲ ಚಕ್ರಕಮ್ |
ವನಮಾಲಾ ಸುನಿಷ್ಪನ್ನಂ ಪೃಥುಚಕ್ರಂ ಸುದರ್ಶನಮ್ ||
ಬ್ರಹ್ಮಚರ್ಯೇಣ ಸಂಪೂಜ್ಯಾ ಭುಕ್ತಿಮುಕ್ತಿ ಪ್ರದಾಯಿನೀ ||

ಕೋರೆದಾಡೆಗಳ ಸಮೀಪದಲ್ಲಿ ಸ್ಥೂಲವಾದ ಚಕ್ರವಿರುವ, ವನಮಾಲಾ ವಿಭೂಷಿತವಾದ, ಸುದರ್ಶನ ಚಕ್ರವಿರುವ ಮೋಕ್ಷದಾಯಕವಾದ ಸಾಲಿಗ್ರಾಮವು ಕಪಿಲಾನಾರಸಿಂಹ ಮೂರ್ತಿ ಸಾಲಿಗ್ರಾಮವು ಇದು ಬ್ರಹ್ಮಚಾರಿಗಳ ಪೂಜೆಗೆ ಯೋಗ್ಯವಾದದ್ದು.



### ವಾಮನ ಮೂರ್ತಿ

ಅತಸೀ ಪುಷ್ಪಸಂಕಾಶಂ ಬಿಂದುನೋಪರಿ ಭೂಷಿತಂ |
ಕ್ಷತಂ ಕುಂಡಲ ಸಂಯುಕ್ತಂ ವಕ್ತ್ರೇವಾ ಬಿಂದು ಪೂರ್ವಕಮ್॥
ಹ್ರಸ್ವಂಚ ವರ್ತುಲಂಚೈವ ವಾಮನಂ ಪರಿಕೀರ್ತಯೇತ್ ||

ಅಗಸೀ ಪುಷ್ಪದಂತೆ ಶೋಭಿಸುವ ಮೇಲೆ ಬಿಂದು ಇರುವ ಭಗ್ನವಾದ ಕುಂಡಲ ಇರುವ ಮತ್ತು ಮುಖದಲ್ಲಿ ಬಿಂದು ಇರುವ ಚಿಕ್ಕವರ್ತುಲ ಇರುವ ಸಾಲಿಗ್ರಾಮವು ವಾಮನ ಮೂರ್ತಿ ಸಾಲಿಗ್ರಾಮವು.

### ದಧಿವಾಮನ ಮೂರ್ತಿ

ಹ್ರಸ್ವಂ ಸುವರ್ತುಲಂಚೈವ ಬಿಂದುನೋಪರಿ ಭೂಷಿತಮ್ |
ಶ್ಯಾಮಲಂ ಕೃಷ್ಣವರ್ಣಂಚಾಪ್ಯಾಸ್ಯ ಚಕ್ರಂ ಸಮೀಪಗಮ್ |
ದಧಿವಾಮನ ಮಾಹುಸ್ತಂ ದುರ್ಲಭಂ ಸರ್ವಕಾಮದಮ್ ||

### ಪ್ರಕಾರಾಂತರಂ

ಬಿಂದು ದ್ವಯಂಚ ಹ್ರಸ್ವಂಚ ಶ್ರೀಕರಂ ವನಮಾಲಯಾ |
ಕೃಷ್ಣವರ್ಣಂ ಮಹಾಸ್ನಿಗ್ಧಂ ಬಿಂದುನೋಪರಿ ಭೂಷಿತಂ ||
ದಧಿವಾಮನ ಮಿತ್ಯಾಹು ರ್ಭುಕ್ತಿಮುಕ್ತಿ ಫಲಪ್ರದಮ್|

ಚಿಕ್ಕ ವರ್ತುಲವುಳ್ಳ ಮೇಲೆ ಬಿಂದು ಇರುವ ಶ್ಯಾಮಲ, ಕಪ್ಪುಬಣ್ಣದ; ಮುಖದ ಹತ್ತಿರ ಚಕ್ರವಿರುವ ಮತ್ತು ಸರ್ವರ ಅಪೇಕ್ಷೆಗಳನ್ನು ಪೂರೈಸುವ ದಧಿವಾಮನ ಮೂರ್ತಿ ಸಾಲಿಗ್ರಾಮವು ಸುಲಭವಾಗಿ ಸಿಗುವದಿಲ್ಲ.

### ಪ್ರಕಾರಾಂತರಂ

ಚಿಕ್ಕ ಚಿಕ್ಕ ಎರಡು ಬಿಂದುಗಳುಳ್ಳ ವನಮಾಲೆಯಿಂದ ಸುಶೋಭಿತವಾಗಿರುವ ಕಪ್ಪುಬಣ್ಣದ ಅಧಿಕವಾದ ಸ್ನಿಗ್ಧತೆಯುಳ್ಳ ಮತ್ತು ಮೇಲ್ಭಾಗದಲ್ಲಿ ಬಿಂದು ಇರುವ ಮುಕ್ತಿಪ್ರದವಾದ ಸಾಲಿಗ್ರಾಮವು ದಧಿವಾಮನ ಮೂರ್ತಿ ಸಾಲಿಗ್ರಾಮವು.

## ಲಕ್ಷ್ಮೀನೃಸಿಂಹ ಮೂರ್ತಿ

ವಾಮೇ ಚಕ್ರದ್ವಯಯುತಃ ಕೃಷ್ಣ ವರ್ಣಸ್ಸಬಿಂದುಕಃ ।
ಲಕ್ಷ್ಮೀನೃಸಿಂಹೋ ವಿಜ್ಞೇಯೋ ಭುಕ್ತಿ ಮುಕ್ತಿ ಫಲಪ್ರದಃ ॥

ಎಡಭಾಗದಲ್ಲಿ ಎರಡು ಚಕ್ರಗಳಿರುವ, ಕಪ್ಪುಬಣ್ಣವುಳ್ಳ ಮತ್ತು ಬಿಂದು ಸಹಿತವಾಗಿರುವ, ಮುಕ್ತಿಪ್ರದಾಯಕವಾದ ಸಾಲಿಗ್ರಾಮವು ಲಕ್ಷ್ಮೀನೃಸಿಂಹ ಸಾಲಿಗ್ರಾಮವು.

## ರಾಮಾಖ್ಯ ಮೂರ್ತಿ

ಕದಂಬ ಕುಸುಮಾಕಾರಂ ಬಿಂದುನೋಪರಿ ಭೂಷಿತಮ್ ।
ಧನುರ್ಬಾಣಾಖ್ಯರೇಖಾಢ್ಯಂ ಪದ್ಮರೇಖಾ ಸಮನ್ವಿತಮ್ ॥
ರಾಮಂ ರಾಮಂ ಚ ದುರ್ಲಭಂ ಸರ್ವಕಾಮದಂ ॥

ಬಾಳೆಯ ಹೂವಿನ ಆಕಾರವಾಗಿರುವ; ಮೇಲೆ ಬಿಂದುವುಳ್ಳ, ಧನಸ್ಸು ಬಾಣಗಳ ರೇಖೆಗಳುಳ್ಳ ಮತ್ತು ಪದ್ಮರೇಖೆಗಳುಳ್ಳ, ಸರ್ವ ಅಪೇಕ್ಷೆಗಳನ್ನು ಪೂರ್ಣಗೊಳಿಸುವ ಸಾಲಿಗ್ರಾಮವು ರಾಮಾಖ್ಯ ಸಾಲಿಗ್ರಾಮವು.

## ಶ್ರೀರಾಮ ಮೂರ್ತಿ

ಕೋದಂಡ ಕುಕ್ಕುಟಾಂಡಾಭ ಶ್ಯಾಮಲೋನ್ನತ ಪೃಷ್ಠಕಮ್ ।
ಸವ್ಯಾಪಸವ್ಯ ತೂಣೀರಂ ಪೃಷ್ಠೇ ಚಾಪ ವಿರಾಜಿತಮ್ ॥೧॥

ಕಲ್ಪದ್ರುಮ ಸಮಾಯುಕ್ತಂ ಪೃಷ್ಠೇಚ್ಛತ್ರ ಸಮನ್ವಿತಮ್ ।
ರಾಮಂ ದಾಶರಥಿಂ ವಿದ್ಧಿ ದುರ್ಲಭಂ ಭುವನತ್ರಯೇ ॥೨॥

ಧನಸ್ಸು, ಕೋಳಿಯ ಅಂಡ (ತತ್ತಿ)ದ ಕಾಂತಿಯಂತೆ ಇರುವ ಶ್ಯಾಮವರ್ಣದ, ಪೃಷ್ಠವು ಉನ್ನತವಾಗಿರುವ ಎಡಬಲಗಳಲ್ಲಿ ಬತ್ತಳಿಕೆ ಇರುವ ಪೃಷ್ಠ ಭಾಗದಲ್ಲಿ ಧನಸ್ಸು ಛತ್ರಗಳು ಶೋಭಿಸುತ್ತಿರುವ, ಕಲ್ಪವೃಕ್ಷದಿಂದ ಕೂಡಿರುವ ದಶರಥ ಪುತ್ರ ಶ್ರೀರಾಮ ಸಾಲಿಗ್ರಾಮವು ಇದು ಮೂರು ಲೋಕಗಳಲ್ಲಿ ದೊರೆಯುವದು ಕಠಿಣವಾದದ್ದು.



## ಶ್ರೀ ಸೀತಾರಾಮ ಮೂರ್ತಿ

ಕುಕ್ಕುಟಾಂಡ ಸಮೋಪೇತ (ಮಾಕಾರ) ಮಧೋವಕ್ತ್ರಂ ಸಕುಂಡಲಮ್ ।
ದ್ವಾರದೇಶೇ ಸಮೇ ಚಕ್ರೇ ಕಲ್ಪವೃಕ್ಷ ಸುಚಿಹ್ನಕಮ್ ॥೧॥
ವಾಮಪಾರ್ಶ್ವೇ ಶಿರಶ್ಚಕ್ರಂ ರೇಖಾಲಾಂಛಿತ ಚಿಹ್ನಕಮ್ ।
ಸೀತಾರಾಮಂ ತು ತಂ ವಿದ್ಧಿ ಭುಕ್ತಿಮುಕ್ತಿ ಫಲಪ್ರದಂ ॥೨॥

ಕೋಳಿಯ ಅಂಡಾಕಾರ (ತತ್ತಿ) ವಾಗಿರುವ, ಕೆಳಭಾಗದಲ್ಲಿ ಮುಖವಿರುವ, ಚಕ್ರವಿರುವ, ದ್ವಾರ ಪ್ರದೇಶದಲ್ಲಿ ಚಕ್ರ, ಕಲ್ಪವೃಕ್ಷಗಳ ಚಿಹ್ನಗಳುಳ್ಳ ಎಡಭಾಗದಲ್ಲಿ ಪಾರ್ಶ್ವ ಭಾಗದಲ್ಲಿ ಚಕ್ರಾಂಕಿತ ರೇಖೆಗಳುಳ್ಳ ಮತ್ತು ಭಕ್ತರಿಗೆ ಮುಕ್ತಿ ಫಲವನ್ನು ಅನುಗ್ರಹಿಸುವ ಸಾಲಿಗ್ರಾಮವು ಶ್ರೀ ಸೀತಾರಾಮ ಮೂರ್ತಿ ಸಾಲಿಗ್ರಾಮವು.

## ಗೋಪಾಲ ಕ್ಷೇತ್ರಮ್

ಜಂಬೂಫಲ ಸಮಾಕಾರಂ ಕೃಷ್ಣ ವರ್ಣಂ ಸ ಬಿಂದುಕಮ್ ।
ಪೃಷ್ಠೇ ಸುಷಿರಮಾರಮ್ಯ ವಕ್ತ್ರೇ ಮಕರಕುಂಡಲಮ್ ॥೧॥
ಲಲಾಟೇ ವಾಮ ಬಾಣಂ ತು ಬಿಂದುನಾ ಚಾಪಕಂ ಯುತಮ್ ।
ಗೋಪಾಲಕ್ಷೇತ್ರ ಮುತ್ಪತ್ಯಾ ಸರಾಮಂ ತಸ್ಯ ಲಕ್ಷಣಂ ॥೨॥
ಶತ್ರುನಾಶಕರಂ ಪ್ರೋಕ್ತಂ ಸರ್ವಕಾಮ ಫಲಪ್ರದಮ್ ।
ಅಪುತ್ರೇ ಪುತ್ರ ಫಲದಂ ಸರ್ವಮಂಗಲ ಕಾರಕಮ್ ॥೩॥

ನೇರಿಲಹಣ್ಣಿನ ಆಕಾರದಂತಿರುವ ಕಪ್ಪುಬಣ್ಣದ, ಬಿಂದುಸಹಿತವಾದ, ಪೃಷ್ಠಭಾಗದಲ್ಲಿ ರಮ್ಯವಾಗಿರುವ, ಮುಖದಲ್ಲಿ ಮಕರ ಕುಂಡಲಗಳಿರುವ, ಹಣೆಯಲ್ಲಿ ಬಿಲ್ಲು, ಬಾಣವೂ ಮತ್ತು ಬಿಂದುವೂ ಯುಕ್ತವಾಗಿರುವ ಹಾಗೂ ಗೋಪಾಲ ಕ್ಷೇತ್ರದಲ್ಲಿ ಉತ್ಪತ್ತಿಯಾಗಿರುವ ಗೋಪಾಲಕ್ಷೇತ್ರ ಸಾಲಿಗ್ರಾಮವು ಶತ್ರುಗಳನ್ನು ನಾಶ ಮಾಡುವಂಥದೂ, ಸರ್ವ ಅಪೇಕ್ಷೆಗಳನ್ನು ಪೂರ್ಣಗೊಳಿಸುವಂಥದೂ, ಸಂತಾನ ಫಲವನ್ನು ಅನುಗ್ರಹಿಸತಕ್ಕಂಥದೂ, ಸರ್ವ ಮಂಗಲವನ್ನುಂಟು ಮಾಡತಕ್ಕಂಥದೂ ಆಗಿರುವದು.

## ಬ್ರಹ್ಮ ಮೂರ್ತಿ

ಪರಮೇಷ್ಠೀತು ಶುಕ್ಲಾಭಃ ಚಕ್ರಮೇಕಂ ತಥಾಂಬುಜಮ್ ।
ಸುವರ್ತುಲಂ ತಥಾಪೀತಂ ಪೃಷ್ಠತಸ್ಸುಷಿರಂ ಧ್ರುವಮ್ ॥೧॥
ಬ್ರಹ್ಮಮೂರ್ತಿಸ್ತು ವಿಜ್ಞೇಯಾ ಭೋಗ ಮೋಕ್ಷ ಫಲಪ್ರದಾ ॥

ಶುಭ್ರ ವರ್ಣದ ಕಾಂತಿ ಇರುವ ಒಂದು ಚಕ್ರವುಳ್ಳ ಮತ್ತು ಒಂದು ಕಮಲವುಳ್ಳ ವರ್ತಲಾಕಾರವೂ ಹಳದಿ ಬಣ್ಣದ ಪೃಷ್ಠ ಭಾಗವು ಮತ್ತು ರಂಧ್ರವುಳ್ಳ ಬ್ರಹ್ಮಮೂರ್ತಿ ಸಾಲಿಗ್ರಾಮವು ಭೋಗಮೋಕ್ಷ ಫಲಪ್ರದ ವಾಗಿರುವದು.

## ವಾಸುದೇವ ಮೂರ್ತಿ

ಪೂಗೀಫಲ ಸಮಾಕಾರೋಹ್ರಸ್ವಶ್ಚ ಪರಿವರ್ತುಲಃ ।
ದ್ವಾರದೇಶೇ ಸಮೇಚಕ್ರೇ ದೃಶ್ಯೇತೇ ನಾಂತರೀಯಕೇ ॥೧॥
ವಾಸುದೇವಸ್ತುವಿಜ್ಞೇಯಃ ಶುಕ್ಲಾಭಶ್ಚ ಸ್ವತೇಜಸಾ ।
ಅಪಮೃತ್ಯುಹರಂಶ್ಚೈವ ಸರ್ವಕಾಮಫಲಪ್ರದಃ ॥೨॥

ಅಡಿಕೆ ಬೆಟ್ಟಯಂತೆ ಚಿಕ್ಕದಾಗಿರುವ, ವರ್ತುಲಾಕಾರವುಳ್ಳ, ದ್ವಾರ ಭಾಗದಲ್ಲಿ ಚಕ್ರವು ಅಂತರ್ಭಾಗದಲ್ಲಿ ಗೋಚರಿಸುತ್ತಲಿದ್ದು, ತನ್ನ ತೇಜಸ್ಸಿನಿಂದ ಹೊಳೆಯುತ್ತಿರುವ ವಾಸುದೇವ ಸಾಲಿಗ್ರಾಮವು ಅಪಮೃತ್ಯುವನ್ನು ಪರಿಹರಿಸುವದಲ್ಲದೆ ಎಲ್ಲ ಫಲಾಪೇಕ್ಷೆಗಳನ್ನು ಪೂರ್ಣಗೊಳಿಸುವದು.

## ಮಹಾವಿಷ್ಣು ಮೂರ್ತಿ

ಸುದರ್ಶನಂ ಮಹಾವಿಷ್ಣುಂ ರೇಖಾಚಕ್ರಂ ಮಹಾದ್ಯುತಿಮ್ ।
ಕೃಷ್ಣವರ್ಣಂ ಸುವಿಖ್ಯಾತಂ ಸರ್ವ ಮೃತ್ಯುಹರಂ ಶುಭಂ ॥

ಸುದರ್ಶನ ಚಕ್ರವು ರೇಖಾಕಾರವಾಗಿದ್ದು ಸಾಕಷ್ಟು ಹೊಳಪುಳ್ಳ, ಕಪ್ಪು ವರ್ಣದಿಂದ ಪ್ರಖ್ಯಾತವಾಗಿರುವ ಮಹಾವಿಷ್ಣು ಸಾಲಿಗ್ರಾಮವು ಅಕಾಲಮೃತ್ಯು ಮೊದಲಾದವನ್ನು ಪರಿಹರಿಸುವದು ಹಾಗೂ ಶುಭಕರ ವಾಗಿರುವದು.



## ನಾರಾಯಣ ಮೂರ್ತಿ

ಶ್ಯಾಮಂ ನಾರಾಯಣಂ ವಿದ್ಧಿ ನಾಭಿಚಕ್ರ ಮಥೋನ್ನತಮ್ ।
ದೀರ್ಘರೇಖಾ ಸಮಾಕ್ರಾಂತಂ ಸುವರ್ಣ ವನಮಾಲಿಕಮ್ ॥೧॥
ಅಯಂನಾರಾಯಣೋಜ್ಞೇಯ ಅಪಮೃತ್ಯು ಹರಶ್ಶುಭಃ ।

ಶ್ಯಾಮ ವರ್ಣವಿರುವ ನಾಭಿ ಪ್ರದೇಶದಲ್ಲಿ ಚಕ್ರವಿದ್ದು ಉನ್ನತ ವಾಗಿರುವ, ದೀರ್ಘರೇಖೆಗಳುಳ್ಳ ಸುವರ್ಣ ವನಮಾಲಾ ಸುಶೋಭಿತವಾದ, ನಾರಾಯಣ ಮೂರ್ತಿ ಸಾಲಿಗ್ರಾಮವು ಅಪಮೃತ್ಯು ನಾಶಕವಾಗಿರುವದು.

## ಲಕ್ಷ್ಮೀನಾರಾಯಣ ಮೂರ್ತಿ

ಧ್ವಜವಜ್ರಾಂಕಿತಂ ಪೀತಂ ವಾಮಪಾರ್ಶ್ವೇತು ವರ್ತುಲಂ ।
ದೀರ್ಘರೇಖಾ ಸಮಾಕ್ರಾಂತಂ ಚತುಶ್ಚಕ್ರ ಸಮನ್ವಿತಂ ॥೧॥
ಮುಸಲಾಸಿ ಧನುರ್ಮಾಲಾ ಶಂಖಚಕ್ರ ಗದಾನ್ವಿತಂ ।
ಲಕ್ಷ್ಮೀನಾರಾಯಣಾಖ್ಯಂ ಚ ಮುಖೇನಾ ಭೌಚನಾರದ ॥೨॥
ಸರ್ವಸಿದ್ಧಿ ಪ್ರದಂ ದಿವ್ಯಂ ಸರ್ವಕರ್ಮ ಶುಭಪ್ರದಂ ।
ಸರ್ವಸೌಭಾಗ್ಯದಂ ನೃಣಾಂ ಲಕ್ಷ್ಮೀನಾರಾಯಣಂವಿದುಃ ॥೩॥

ಧ್ವಜ, ವಜ್ರಗಳ ಗುರುತು ಇರುವ, ಹಳದಿಬಣ್ಣದ, ಎಡಭಾಗದಲ್ಲಿ ವರ್ತುಲಾಕಾರ ಇರುವ ದೀರ್ಘರೇಖೆಗಳುಳ್ಳ, ನಾಲ್ಕು ಚಕ್ರಗಳಿಂದ ಕೂಡಿರುವ ಒನಕೆ, ಖಡ್ಗ, ಧನಸ್ಸು, ಶಂಖ, ಚಕ್ರ, ಗದಾ ಈ ಆಯುಧ ಗಳನ್ನು ಧರಿಸಿದ ಮಾಲಾ ವಿಭೂಷಿತವಾದ ಲಕ್ಷ್ಮೀನಾರಾಯಣ ಸಾಲಿಗ್ರಾಮವು ಸರ್ವಸಿದ್ಧಿ ಪ್ರದಾಯಕವಾಗಿದ್ದು, ಸರ್ವಕಾರ್ಯ ಸಿದ್ಧಿದಾಯಕವು ಸರ್ವಸೌಖ್ಯದಾಯಕವೂ ಆಗಿರುವದು.

## ಶ್ರೀಧರ ಮೂರ್ತಿ

ಶ್ರೀ ಧರಂತು ಶತ್ರೋದೇವ ಚಿಹ್ನಿತಂ ವನಮಾಲಯಾ ।
ಕದಂಬ ಕುಸುಮಾಕಾರಂ ಸರ್ವಸಿದ್ಧಿಪ್ರದಂ ಶುಭಮ್ ॥೧॥

ಬಾಳೆಯ ಹೂವಿನ ಆಕಾರದಂತಿರುವ, ವನಮಾಲಾ ವಿಭೂಷಿತವಾದ, ಸರ್ವಸಿದ್ಧಿ ಪ್ರದಾಯಕವೂ, ಶುಭಕರವೂ ಆದ ಸಾಲಿಗ್ರಾಮವು ಶ್ರೀಧರ ಮೂರ್ತಿ ಸಾಲಿಗ್ರಾಮವು.

## ಸಂಕರ್ಷಣ ಮೂರ್ತಿ

ದ್ವೇಚಕ್ರೇ ಏಕಲಗ್ನೇತು ಪೂರ್ವಭಾಗೇತು ಪುಷ್ಕಲಮ್ ।
ಸಂಕರ್ಷಣಂ ವಿಜಾನೀಯಾದ್ರಕ್ತಾ ಭಂಚಾತಿ ಶೋಭನಮ್ ||೧||

ಎರಡು ಚಕ್ರಗಳುಳ್ಳ, ಪೂರ್ವಭಾಗದಲ್ಲಿ ಪುಷ್ಕಲವಿರುವ, ರಕ್ತ ವರ್ಣದ ಸಾಲಿಗ್ರಾಮವು ಸಂಕರ್ಷಣ ಮೂರ್ತಿ ಸಾಲಿಗ್ರಾಮವು.

## ಪ್ರದ್ಯುಮ್ನ ಮೂರ್ತಿ

ಪ್ರದ್ಯುಮ್ನಃ ಸೂಕ್ಷ್ಮಚಕ್ರಸ್ತು ಪೀತೋದೀಪ್ತಸ್ತ ಥೈವಚ ।
ಸುಷಿರೈರ್ಬಹುಲೈಃ ಚೈವ ದೀರ್ಘಾಕಾರಸ್ತು ತದ್ಭವೇತ್ ||೧||

ಸೂಕ್ಷ್ಮವಾದ ಚಕ್ರವಿರುವ, ಹಳದಿ ಬಣ್ಣದಿಂದ ಹೊಳೆಯುವ, ದೀರ್ಘಾಕಾರವಾಗಿರುವ ಬಹಳ ರಂಧ್ರಗಳ ದೀರ್ಘಾಕಾರವಾಗಿರುವ ಸಾಲಿಗ್ರಾಮವು ಪ್ರದ್ಯುಮ್ನ ಮೂರ್ತಿ ಸಾಲಿಗ್ರಾಮವು.

## ವಿಷ್ಣು ಮೂರ್ತಿ

ಅನಿರುದ್ಧಂತು ನೀಲಾಭಂ ವರ್ತುಲಂ ಚಾತಿ ಶೋಭಿತಮ್ ।
ಕೃಷ್ಣವರ್ಣಂ ತಥಾವಿಷ್ಣುಂ ಸ್ಥೂಲಚಕ್ರಂ ಸುಶೋಭನಮ್ ||೧||

ವರ್ತುಲಾಕಾರವಾಗಿ ಶೋಭಿಸುವ ಕೃಷ್ಣ ವರ್ಣದ ಸ್ಥೂಲವಾದ ಚಕ್ರದಿಂದ ಶೋಭಿಸುವ ಸಾಲಿಗ್ರಾಮವು ವಿಷ್ಣು ಸಾಲಿಗ್ರಾಮವು.

## ಕೃಷ್ಣ ಮೂರ್ತಿ

ಗದಾಕೃತಿಃ ಸದಾರೇಖಾ ಲಕ್ಷ್ಯತೇ ಮಧ್ಯದೇಶತಃ ।
ಕೃಷ್ಣಮೂರ್ತಿಸ್ಸ ವಿಜ್ಞೇಯಾಭೋಗ ಮೋಕ್ಷ ಫಲಪ್ರದಾ ||೧||

ಗದೆಯ ಆಕೃತಿಯುಳ್ಳ, ಮಧ್ಯದಲ್ಲಿ ರೇಖೆಗಳಿರುವ, ಭೋಗ, ಮೋಕ್ಷ ಫಲದಾಯಕವಾದ ಸಾಲಿಗ್ರಾಮವು ಕೃಷ್ಣಮೂರ್ತಿ ಸಾಲಿಗ್ರಾಮವು.



## ಕೂರ್ಮ ಮೂರ್ತಿ

ಕೂರ್ಮ ಶ್ಚೈವೋ ನ್ನತಃ ಪೃಷ್ಟೇ ಶ್ವೇತ ಭೋಗ ಖುರಾನ್ವಿತಃ ।
ಸಕೃಷ್ಣ ವರ್ಣಬಿಂದು ರಸ್ಯಾನ್ನಿರ್ಮಲಃ ಪರಿಕೀರ್ತಿತಃ ||೧||
ಕೂರ್ಮಸ್ತೇವಂ ಸವಿಜ್ಞೇಯಸ್ಸರ್ವಕಾರ್ಯ ಶುಭಪ್ರದಃ ||

ಎತ್ತರವಾಗಿದ್ದು, ಪೃಷ್ಠ ಭಾಗದಲ್ಲಿ ಬೆಳ್ಳಗಿರುವ, ಬಿಂದುಸಹಿತವಾದ, ನಿರ್ಮಲವಾಗಿರುವ, ಹೊಳಪುಳ್ಳ ಕೂರ್ಮಸಾಲಿಗ್ರಾಮವು ಸರ್ವ ಕಾರ್ಯಗಳಲ್ಲಿ ಶುಭ ಪ್ರದವಾದುದು

## ಅನಂತ ಮೂರ್ತಿ

ನಾನಾವರ್ಣ ಮನಂತಂಚನಾಗಭೋಗ ಸುಚಿಹ್ನಕಮ್ ।
ಧ್ವಜಾಕಾರಾತ ದಾರೇಖಾಲಕ್ಷತೇ ಮಧ್ಯ ದೇಶತಃ ||೧||
ಶೇಷಾಕಾರಂ ಮಹಾಸ್ಥೂಲಂ ಸಪ್ತ ಚಕ್ರ ಸಮನ್ವಿತಮ್ !

ಅನಂತ ಬಣ್ಣಗಳುಳ್ಳ ಮಧ್ಯದಲ್ಲಿ ಧ್ವಜಾಕಾರದ, ರೇಖೆಗಳುಳ್ಳ ಉಳಿದ ಭಾಗವು ದಪ್ಪವಾಗಿರುವ. ಏಕಚಕ್ರದಿಂದ ಯುಕ್ತವಾಗಿರುವ ಸಾಲಿಗ್ರಾಮವು ಅನಂತ ಮೂರ್ತಿ ಸಾಲಿಗ್ರಾಮವು.

## ಪ್ರಕಾರಾಂತರಮ್

ಅಥವಾ ಚಾಷ್ಟಚಕ್ರಂತು ದಶಚಕ್ರಂ ಶುಭಾವಹಮ್।
ಚಕ್ರತ್ರಯೋದಶಂ ಪುಣ್ಯಂ ಚತುರ್ದಶ ಮಹಾಫಲಮ್ ||೨||
ಪೀತವರ್ಣಂತಥಾಕೃಷ್ಣಂ ಬಹು ವರ್ಣಂಚನೀಲಕಮ್ ।
ಚಕ್ರಶಂಖ ಗದಾ ಪದ್ಮವನಮಾಲಾ ವಿಭೂಷಿತಮ್ ||೧||
ಅನಂತಂತಂ ವಿಜಾನೀಯಾತ್ ಸರ್ವಸೌ ಭಾಗ್ಯದಾಯಿನಮ್ ।

ಎಂಟು ಚಕ್ರಗಳು ಅಥವಾ ಹತ್ತು ಚಕ್ರಗಳು ಇದ್ದರೆ ಶುಭಕರ ಹದಿ ಮೂರು ಚಕ್ರಗಳು. ಇದ್ದರೆ ಪುಣ್ಯಪ್ರದ, ಹದಿನಾಲ್ಕು ಚಕ್ರಗಳಿದ್ದರೆ ಅಧಿಕ ಫಲವು ಹಳದಿ ಬಣ್ಣದ ಅಥವಾ ಕಪ್ಪು ಬಣ್ಣದ ಇಲ್ಲವೆ ಅನೇಕ ಬಣ,

ಗಳಿಂದ ಕೂಡಿದ ನೀಲವರ್ಣವುಳ್ಳ ಶಂಖ, ಚಕ್ರ, ಗದಾ, ಪದ್ಮಗಳಿಂದ, ವನಮಾಲಾ ವಿಭೂಷಿತವಾದ ಅನಂತ ಸಾಲಿಗ್ರಾಮವು ಸರ್ವಸೌಭಾಗ್ಯದಾವಾಗಿರುವದು.

### ತ್ರಿವಿಕ್ರಮ ಮೂರ್ತಿ

ಕುಕ್ಕುಟಾಂಡ ಸಮಾಕಾರಃ ಊರ್ಧ್ವೆ ಚಕ್ರಸುಶೋಭಿತಃ ।
ದ್ವೇಚಕ್ರೇ ಚೈಕಭಾಗೇತು ಪೂರ್ವಭಾಗೇತು ಪುಷ್ಕಲಃ ॥೧॥
ಧ್ವಜಾಕಾರಸುಬಿಂದ್ವಾಢ್ಯಃ ಶಂಖ ಲಾಂಗಲ ಸಂಯುತಃ ।
ತ್ರಿವಿಕ್ರಮಸ್ಸವಿಜ್ಞೇಯೋಹ್ಯಪಮೃತ್ಯುಹರಃ ಶುಭಃ

ಕೋಳಿಯ ತತ್ತಿಯಾಕಾರದ, ಊರ್ಧ್ವ ಭಾಗದಲ್ಲಿ ಚಕ್ರ ವಿರುವ, ಒಂದು ಭಾಗದಲ್ಲಿ ಎರಡು ಚಕ್ರಗಳುಳ್ಳ, ಪೂರ್ವಭಾಗದಲ್ಲಿ ಪುಷ್ಕಲವಿರುವ, ಧ್ವಜಾಕಾರದ, ಬಿಂದು ಸಹಿತವಾದ ಶಂಖ ಸಹಿತವಾದ ತ್ರಿವಿಕ್ರಮ ಸಾಲಿಗ್ರಾಮವು ಶುಭಕರವಾಗಿದ್ದು ಅಪಮೃತ್ಯು ಪರಿಹಾರವಾಗಿರುವದು.

### ಲಕ್ಷ್ಮೀಗೋಪಾಲ ಮೂರ್ತಿ

ಕುಕ್ಕುಟಾಂಡ ಸಮಾಕಾರಂ ಶ್ರೀಧರಂ ವನಮಾಲಿನಮ್
ವೇಣುಲಾಂಗಲಚಿಹ್ನಂಚ ಕುಂಡಲಾಭ್ಯಾಂ ಸುಶೋಭಿತಮ್ ॥೧॥
ಲಕ್ಷ್ಮೀಗೋಪಾಲ ಮಾಹುಸ್ತಂ ದುರ್ಲಭಂ ಭುವನತ್ರಯೇ ।
ಪುತ್ರಲಾಭಂತಥಾ ಮೋಕ್ಷಂ ಭಕ್ತಿಂಮುಕ್ತಿಂದದಾತಿಚ ॥೨॥

ಕೋಳಿಯ ತತ್ತಿಯಾಕಾರವಾಗಿದ್ದು, ಶ್ರೀಯನ್ನು ಧರಿಸಿ, ವನಮಾಲಾ ವಿಭೂಷಿತವಾದ ಕೊಳಲ ಚಿಹ್ನವುಳ್ಳ ಕರ್ಣಕುಂಡಲಗಳಿಂದ ಶೋಭಿತವಾದ ಲಕ್ಷ್ಮೀಗೋಪಾಲ ಸಾಲಿಗ್ರಾಮವು ಅತ್ಯಂತ ದುರ್ಲಭವಾಗಿದ್ದು, ಪುತ್ರ ಲಾಭವನ್ನುಂಟು ಮಾಡುವಂಥದೂ, ಮೋಕ್ಷದಾಯಕವೂ ಆಗಿರುವದು.

### ಶ್ರೀಹರಿ ಮೂರ್ತಿ

ಸ್ಥೂಲಚಕ್ರೋಭವೇದ್ದೇವೋ ಹರಿಃ ಲೋಹಿತವರ್ಣಕಃ ॥

ಸ್ಥೂಲ (ದಪ್ಪ)ವಾದ ಚಕ್ರ ಕೆಂಪು (ಲೋಹಿತ) ಬಣ್ಣ ವಿರುವ ಸಾಲಿಗ್ರಾಮವು ಶ್ರೀಹರಿ ಸಾಲಿಗ್ರಾಮವು.



### ಬಲಭದ್ರ ಮೂರ್ತಿ

ಬಲಭದ್ರೋಭವೇದ್ದೇವೋ ಕೀರ್ತಿ ಗೋತ್ರ ವಿವರ್ಧನಃ ।
ಶ್ಯಾಮವರ್ಣೋ ಮಹಾಸ್ನಿಗ್ಧ ಶ್ಛತ್ರಾಕಾರ ಸ್ತಥೈವಚ ॥೧॥
ಸೂಕ್ಷ್ಮದ್ವಾರೇಣ ಬಿಂದೂನಾಂರಕ್ತ ರೇಖಾಭಿರನ್ವಿತಃ ।
ಶೀರ್ಷೇತು ಪುಷ್ಕಲಂ ಬಿಭ್ರನ್ಮಹಾ ಸ್ನಿಗ್ಧಂಚಕೋಮಲಮ್ ॥೨॥

ಶ್ಯಾಮ ವರ್ಣವುಳ್ಳ, ಅಧಿಕಸ್ನಿಗ್ಧವಾಗಿರುವ, ಛತ್ರಾಕಾರವಾದ. ಸೂಕ್ಷ್ಮವಾದ ದ್ವಾರವುಳ್ಳ, ಕೆಂಪುರೇಖೆಗಳಿಂದ ಯುಕ್ತವಾದ, ಶಿರಸ್ಸಿನಲ್ಲಿ ಪುಷ್ಕಲವಿರುವ, ಕೋಮಲವಾಗಿರುವ ಬಲಭದ್ರ ಸಾಲಿಗ್ರಾಮವು ಕೀರ್ತಿದಾಯಕವಾಗಿರುವದು.

### ಗೋಪಾಲ ಮೂರ್ತಿ

ಗೋಪಾಲ ಮೂರ್ತಿ ವಿಜ್ಞೇಯಾ ದುರ್ಲಭಾ ಭುವನತ್ರಯೇ ।
ಪುತ್ರಲಾಭಂತಥಾ ಮೋಕ್ಷಂಗವಾಂವೃದ್ಧಿಂದದಾತಿಸಾ ॥೧॥

ಗೋಪಾಲ ಮೂರ್ತಿ ಸಾಲಿಗ್ರಾಮವು ಪುತ್ರ ಸಂತಾನವನ್ನೂ, ಆಕಳುಗಳ ವೃದ್ಧಿಯನ್ನೂ, ಮೋಕ್ಷವನ್ನೂ ದಯಪಾಲಿಸುವಂಥದಾಗಿದ್ದು ಇದು ಮೂರು ಲೋಕಗಳಲ್ಲಿ ಸಿಗುವದು ಕಠಿಣವೆಂದು ಅಭಿಪ್ರಾಯ.

### ಲಕ್ಷ್ಮೀ ಗೋಪಾಲ ಮೂರ್ತಿ

ಸರ್ವಶತ್ರು ವಿನಾಶಾಯ ಲಕ್ಷ್ಮೀಗೋಪಾಲಕಂಸದಾ ।
ಛತ್ರಾಕಾರಂಮಹಾಸ್ನಿಗ್ಧಂ ದ್ವಾರಂ ನಾಸ್ತಿ ಸಬಿಂದುಕಮ್ ॥೧॥
ಸ್ಥೂಲಂ ಶ್ರೇಷ್ಠಂ ಗುರುತಥಾ ಮಹಾತೇಜಃ ಪ್ರಕಾಶಿತಮ್ ।

ಛತ್ರಕಾರವಾಗಿದ್ದು ಅಧಿಕ ಸ್ನಿಗ್ಧತೆಯುಳ್ಳ ಮತ್ತು ದ್ವಾರವಿಲ್ಲದ ಬಿಂದು ಸಹಿತವಾದ. ಸ್ಥೂಲವಾದ,ಶ್ರೇಷ್ಠವಾದ,ತನ್ನ ತೇಜಸ್ಸಿನಿಂದ ಪ್ರಕಾಶಿಸಲ್ಪಡುವ ಲಕ್ಷ್ಮೀಗೋಪಾಲ ಸಾಲಿಗ್ರಾಮವು ಶತ್ರುನಾಶಮಾಡತಕ್ಕಂಥದು ಆಗಿದೆ

### ವರಾಹಕ್ಷೇತ್ರಮ್

ವರಾಹರೂಪೋದೇವಾನಾಂ ಶ್ಯಾಮಲೋನ್ನತ ಪೃಷ್ಠಕಃ ।

ಪೃಷ್ಠಭಾಗೇತಥಾ ಹೇಮಬಿಂದುನಾ ಪರಿಭೂಷಿತಃ ||೧||

ಸಮೇದ್ವೇ ಚಕ್ರಕೇಚಾಥಃ ಸೂಕ್ಷ್ಮ ಚಕ್ರಂ ಸುಚಿಹ್ನಕಮ್ |
ವಾರಾಹಕ್ಷೇತ್ರಮುಪ್ತತ್ಯಾ|ಉನ್ನತ ಶಾಮಲವರ್ಣದ,ಪೃಷ್ಠಭಾಗವು ಉನ್ನತ ಪಾಗಿರುವ, ಹೇಮಬಿಂದುವಿನಿಂಡ ಶೋಭಿತವಾದ, ಸಮಾನವಾದ ಎರಡು ಚಕ್ರಗಳುಳ್ಳ, ಕೆಳಭಾಗದಲ್ಲಿ ಸೂಕ್ಷ್ಮಚಕ್ರದ ಚಿಹ್ನವುಳ್ಳ, ಸಾಲಿಗ್ರಾಮವು ವರಾಹ ಸಾಲಿಗ್ರಾಮವು.

### ಚತುಶ್ಚಕ್ರಂ ಜನಾರ್ದನ

ನಾಲ್ಕು ಚಕ್ರಗಳುಳ್ಳ ಸಾಲಿಗ್ರಾಮವು ಚಾತುಶ್ಚಕ್ರ ಜನಾರ್ದನ ಸಾಲಿಗ್ರಾಮವು

### ಅಥಸುದರ್ಶನ ಮೊದಲಾದ ಮೂರ್ತಿಗಳ ಲಕ್ಷಣ

(ಪ್ರಕಾರಾಂತರೇಣ)

ಏಕಂ ಸುದರ್ಶನೇ ಚಕ್ರಂ ಲಕ್ಷ್ಮೀನಾರಾಯಣೋದ್ವಿಕಮ್ |
ತ್ರಿಚಕ್ರಂ ಚಾಚ್ಯುತೊ ಜ್ಞೇಯಂಚತು ಶ್ಚಕ್ರಂ ಜನಾರ್ದನೇ ||೧||
ಪಂಚಚಕ್ರಂ ವಾಸುದೇವೊ ಷಟ್ಕಂ ಸಂಕರ್ಷಣೇತಥಾ |
ಸಪ್ತ, ಚಕ್ರಂತು ವಾರಾಹೇ ಚಾಷ್ಟಕಂಚ ಪುರುಷೋತ್ತಮೇ ||೨||
ನವಕಂ ನಾರಸಿಂಹೇ ಚದಶಕಂವಾಮನೇತಥಾ |
ಏಕಾದಶತು ಪ್ರದ್ಯುಮ್ನೇತ್ವಂ ನಂತೆ ದ್ವಾದಶ ಸ್ಮೃತಲಮ್ ||೩||
ಅನ್ಯೇಷು ಬಹು ಚಕ್ರೇಷುಪರಮಾತ್ಮಾ ಪ್ರತಿಷ್ಠಿತಃ |

ಸುದರ್ಶನ ಸಾಲಿಗ್ರಾಮಕ್ಕೆ ಒಂದು ಚಕ್ರವು, ಲಕ್ಷ್ಮೀನಾರಾಯಣ ಸಾಲಿಗ್ರಾಮಕ್ಕೆ ಎರಡು ಅಚ್ಯುತಸಾಲಿಗ್ರಾಮಕ್ಕೆ ಮೂರು ಚಕ್ರಗಳು ಜನಾರ್ದನ ಸಾಲಿಗ್ರಾಮಕ್ಕೆ ನಾಲ್ಕು ಚಕ್ರಗಳು.ವಾಸುದೇವ ಸಾಲಿಗ್ರಾಮಕ್ಕೆ ಐದು ಚಕ್ರಗಳು ಸಂಕರ್ಷಣ ಸಾಲಿಗ್ರಾಮಕ್ಕೆ ಆರು ಚಕ್ರಗಳು, ವರಾಹ ಸಾಲಿಗ್ರಾಮಕ್ಕೆ ಏಳು ಚಕ್ರಗಳು ಪುರುಷೋತ್ತಮ ಸಾಲಿಗ್ರಾಮಕ್ಕೆ ಎಂಟುಚಕ್ರಗಳು ನಾರಸಿಂಹ ಸಾಲಿಗ್ರಾಮಕ್ಕೆ ಒಂಭತ್ತು ಚಕ್ರಗಳು. ವಾಮನ ಸಾಲಿಗ್ರಾಮಕ್ಕೆ ಹತ್ತು ಚಕ್ರಗಳು. ಪ್ರದ್ಯುಮ್ನ ಸಾಲಿಗ್ರಾಮಕ್ಕೆ ಹನ್ನೊಂದು, ಚಕ್ರಗಳು



ಅನಂತ ಸಾಲಿಗ್ರಾಮಕ್ಕೆ ಹನ್ನೆರಡು ಚಕ್ರಗಳು. ಇನ್ನುಳಿದವುಗಳ.ಹೆಚ್ಚು ಚಕ್ರಗಳಲ್ಲಿಯೂ ಪರಮಾತ್ಮನು ಪ್ರತಿಷ್ಠಿತನಾಗಿರುವನು.

### ಮೂರ್ತಿ ವಿಶೇಷ ಪೂಜಾಫಲ

ಹಿರಣ್ಯಗ ರ್ಭೋವಿಜ್ಞೇಯಃ ಪೂಜಾಕರ್ತುಶ್ಚ ಶೋಭನಃ |
ಶಿವನಾಮಸಹಸ್ರಂಚ ಸಾಲಿಗ್ರಾಮ ಸಹ ಸ್ರಕಮ್ ||
ಪೂಜಾಫಲೈಃ ಸಮಂಪ್ರೋಕ್ತಂ ಭುಕ್ತಿಮುಕ್ತಿ ಪ್ರದಾಯಕಮ್||

ಹಿರಣ್ಯಗರ್ಭ ಸಾಲಿಗ್ರಾಮವನ್ನು ಪೂಜಿಸುವದರಿಂದ ಒಂದು ಸಾವಿರ ಸಾಲಿಗ್ರಾಮಗಳನ್ನು ಪೂಜಿಸಿದ ಫಲ ಮತ್ತು ಶಿವಸಹಸ್ರನಾಮಗಳನ್ನು ಪಠಣ ಮಾಡಿದ ಫಲ ಇವೆರಡರಿಂದ ಸಿಗುವಷ್ಟು ಫಲಪ್ರಾಪ್ತವಾಗುವದು.

### –ಕಾಸಾಂಚಿನ್ಮೂರ್ತಿಗಳ ಸ್ವರೂಪ ಮತ್ತು ದುರ್ನಿರೂಪ–

ಮೂರ್ತ ಯಸ್ಸಂತಿ ಯಾವತ್ಯೋ ವಿಷ್ಣೋ ಸ್ವಾಪಾಚ್ಛ್ರಿಯಃ ಪತೇಃ|
ತಾವತ್ಯೋ ಮೂರ್ತಯಸ್ಸಂತಿ ಸಾಲಿಗ್ರಾಮೇಷುನಾರದ ||೧||
ಸಾಲಿಗ್ರಾಮ ಶಿಲಾನಾಂತು ಮೂರ್ತೀನಾಂ ಪೃಥಗಾತ್ಮತಾ |
ನಶಕ್ಯತೇ ಮಯಾವಕ್ತುಂ ಕಲ್ಪಕೋಟಿ ಶತೈರಪಿ ||೨||

ವಿಷ್ಣುವಿನ ಮೂರ್ತಿಗಳು ಎಷ್ಟು ಇರುತ್ತವೆಯೋ ಅಷ್ಟು ಪ್ರಕಾರದ ಸಾಲಿಗ್ರಾಮ.ಗಳು ಇರುವವು. ಆದರೆ ಆ ವಿಷ್ಣು ಪರಮಾತ್ಮನ ಮೂರ್ತಿಗಳು ಎಷ್ಟು ಇರುತ್ತವೆ ಎಂಬುದನ್ನು ಹೇಳಲಿಕ್ಕೆನನಗೆ ಸಾಧ್ಯವಾಗುವದಿಲ್ಲ ಆದ್ದರಿಂದ ಕಲ್ಪಕೋಟಿ. ಶತಸಂಖ್ಯೆಗಳಿರುವ ಸಾಲಿಗ್ರಾಮಗಳನ್ನೂ ನಾನು ಹೇಳುವದಕ್ಕೆ ಸಾಧ್ಯವಾಗುವದಿಲ್ಲವೆಂದು ಬ್ರಹ್ಮದೇವನು ನಾರದಮಹರ್ಷಿಗೆ ಹೇಳಿದನು

### ಸಾಲಿಗ್ರಾಮಗಳು

ಆಕೋಣಂ ದರ್ದುರಂ ಚೈವದಗ್ಧಮುಷ್ಣಂ ಕಲಂಕಿತಮ್ |
ಅಚಕ್ರಂತುತಥಾಸ್ಪೃಷ್ಟಂ ವಕ್ರಾಸ್ಯಂ ಭಿನ್ನಮೇವವಾ ||೧||
ಬಹುಚಕ್ರಂ ವಕ್ರಚಕ್ರಂ ತಿರ್ಯಕ್ಚಕ್ರಂ ತಥಾತ್ಯ ಜೇತ್|
ದೀರ್ಘಶೋಭಿತ ಮುಚ್ಛಾಂಗ ಮಸೌಮ್ಯಾಕೃತಿ ಮೇವವಾ ||೨||

ಬಹುಬಾಣ ಸಮಾಯುಕ್ತಂ ಸ್ಫುರಿತಾ ಲಕ್ಷ್ಯ ಚಕ್ರಕಮ್ ।
ಅಪಕ್ವಪನಸಾಕಾರಂ ಬಬ್ರಾತ್ರಕಾ ರಂಪರಿತ್ಯಜೇತ್ ||೩||
ಬಂಧನಂ ಬದ್ಧಚಕ್ರಂಚ ಕ್ರೂರ ಚಕ್ರಂ ತಥಾತ್ಯಜೇತ್ ।
ಕರಾಲಂ ವಿಕರಾಲಂ ಚವಕ್ತ್ರತುಂಡಂ ತಥೈವಚ ||೪||
ದರ್ದುರಂಸ್ಫುಟಿತಂದಗ್ಧಂ ತ್ರಿಕೋಣಂ ಪರಿವರ್ಜಯೇತ್ ।
ಬಹುರೇಖಂ ಪರಿಚ್ಛಿದ್ರಂತಿರ್ಯಕ್ ಚಕ್ರಂ ತಥಾತ್ಯಜೇತ್ ।

ಮೂರು ಮೂಲೆಯುಳ್ಳ. ಕಪ್ಪೆ ಆಕಾರವುಳ್ಳ, ಸುಡಲ್ಪಟ್ಟ, ಉಷ್ಣತೆಯುಳ್ಳ, ದೋಷವುಳ್ಳ ಚಕ್ರ ಇಲ್ಲದೆ ಇರುವ, ಸವೆದಂಥ, ವಕ್ರವಾದ ಮುಖವುಳ್ಳ, ಒಡೆದದ್ದು, ಬಹಳ ಚಕ್ರಗಳುಳ್ಳ ಸೊಟ್ಟಾದ ಚಕ್ರಗಳುಳ್ಳ. ಅಡ್ಡವಾದ ಚಕ್ರವುಳ್ಳ, ಇವುಗಳನ್ನು ತ್ಯಜಿಸಬೇಕು. ಮತ್ತು ಬಹಳವಾಗಿ ಶೋಭಿಸುವ, ಬಹಳಬಿಳಿಯದಾಗಿರುವ, ಉಗ್ರವಾಕೃತಿಯುಳ್ಳ, ಬಹಳ ಬಾಣಗಳಿಂದ ಯುಕ್ತವಾದ, ಬಹಳ ಅಸ್ಪಷ್ಟವಾಗಿರುವ ಚಕ್ರಗಳುಳ್ಳವು, ಪಕ್ವವಾಗದೆ (ಹಣ್ಣಾಗದೆ ಇರುವ) ಇರುವಹಲಸಿನ ಹಣ್-ನಂತಿರುವ, ಚಿಕ್ಕನಾಕಾರವುಳ್ಳವುಗಳನ್ನು ತ್ಯಜಿಸಬೇಕು ಮತ್ತು ಚಕ್ರಗಳನ್ನು ಕಟ್ಟಿಹಾಕಲ್ಪಟ್ಟ ಕ್ರೂರವಾದಚಕ್ರಗಳುಳ್ಳ ಬಯಂಕರವಾದ ಬಾಯಿಯುಳ್ಳ ಅಂಜಿಕೆಬರುವಂತೆ ಬಾಯಿತೆರೆದ ಚಕ್ರವುಳ್ಳ, ಹಾಗೂ ಒಳಗೆ ಸ್ಪಷ್ಟವಾಗಿ ಒಡೆದಂಥ ಕಪ್ಪೆಯ ಆಕಾರವುಳ್ಳಂಥ ಸುಡಲ್ಪಟ್ಟ ಮೂರುಮೂಲೆಗಳುಳ್ಳ, ಬಹಳ ರೇಖೆಗಳುಳ್ಳ. ಒಡೆದಂಥ. ಸೊಟ್ಟಾಗಿರುವ ಚಕ್ರವುಳ್ಳ ಸಾಲಿಗ್ರಾಮಗಳನ್ನು ತ್ಯಾಜ್ಯ ಮಾಡಬೇಕು.

## ವರ್ಜ್ಯ ಸಾಲಿಗ್ರಾಮ ಪೂಜಾಫಲ

ದುದ್ದುರಂ ದಗ್ಧ ಮುಷ್ಣಂಸ್ಯಾತ್ ದುಃಖದಾರಿದ್ರ್ಯ ದಾಯಿಚ।
ಬಂಧಕಂ ಬದ್ಧಚಕ್ರಂಚ ತ್ರಿಕೋಣಂ ಬಂಧುನಾಶನಮ್ ।
ಅಂತ ಸ್ಫುಟಿತ ಚಕ್ರಂಚ ಬಂಧುಪುತ್ರ ವಿನಾಶಕಮ್ ।

ಅರ್ಥಘ್ನೀವಿಮಲಾಚ ಸಾತ್ಕರ್ಕಶಂ ಕ್ಷೇತ್ರ ಮೇವಚ ॥
ವಿಕರಾಲಂ ಮಹಾದ್ಯುಃಖಂಕರಾಲಂ ಕಾಲನಾಶನಮ್ ॥

ಕಪ್ಪೆಯ ಆಕಾರದ, ಸುಡಲ್ಪಟ್ಟ ಉಷ್ಣವಾಗಿರುವ ಸಾಲಿಗ್ರಾಮಗಳನ್ನು



ಪೂಜಿಸುವದರಿಂದ ದುಃಖದಾರಿದ್ರ್ಯಗಳುಂಟಾಗುವವು. ಕಟ್ಟಿಹಾಕಲ್ಪಟ್ಟ ಮತ್ತು ಮೂರು ಮೂಲೆಯ ಸಾಲಿಗ್ರಾಮಗಳಿಂದ ಬಂಧುನಾಶವು. ಒಳಭಾಗದಲ್ಲಿ ಒಡೆದ ಚಕ್ರಗಳ ಸಾಲಿಗ್ರಾಮಗಳಿಂದ ಬಂಧುಗಳು, ಪುತ್ರರ ನಾಶವು. ಕರ್ಕಶವಾದ ಸಾಲಿಗ್ರಾಮವು ಧನ ಹಾನಿಯನ್ನುಂಟು ಮಾಡುವವು ಕ್ರೂರವಾದ ಸಾಲಿಗ್ರಾಮಗಳಿಂದ ದುಃಖವು, ಭಯಂಕರವಾದ ಸಾಲಿಗ್ರಾಮಗಳಿಂದ ಕುಲನಾಶವು.

## ಸಾಲಿಗ್ರಾಮ ಪರೀಕ್ಷಾ

ಕ್ಷೀರೇವಾ ತಂಡುಲೋವಾಪಿ ಸಾಲಿಗ್ರಾಮಂ ನಿವೇಶಯೇತ್ ।
ಘನತ್ವಂ ವೃದ್ಧ ಮಾಲೋಕ್ಯ ಗೃಹ್ಣೀಯಾತ್ ಬುದ್ಧಿಮಾನ್ನರಃ ॥

ನಿಜವಾದ ಸಾಲಿಗ್ರಾಮಗಳನ್ನು ಪರೀಕ್ಷಿಸ ಬೇಕಾದರೆ ಅವುಗಳನ್ನು ಆಕಳ ಹಾಲಿನಲ್ಲಿ ಅಥವಾ ಅಕ್ಕಿಯರಾಶಿಯಲ್ಲಿ ಮುಚ್ಚಿಟ್ಟರೆ ಇಪ್ಪತ್ತುನಾಲ್ಕು ತಾಸುಗಳ ನಂತರ ಹಾಲು ಹೆಚ್ಚಾಗಬೇಕು. ಅದರಂತೆ ಅಕ್ಕಿಯೂಸಹ ಹೆಚ್ಚಾಗಬೇಕು. ಹಾಗಾದರೆ ಮಾತ್ರ ಅವು ನಿಜವಾದ (ಅಸಲಿ) ಸಾಲಿಗ್ರಾಮಗಳೆಂದು ತಿಳಿದು ಕೊಳ್ಳಬೇಕು.

## ಸಾಲಿಗ್ರಾಮಗಳ ದಾನ ಅಥವಾ ಕ್ರಯ ವಿಕ್ರಯ

ಸಾಲಿಗ್ರಾಮೇಪ್ರತಿಷ್ಠಂತಿ ಭುವನಾನಿಚತುರ್ದಶ ॥
ತಸ್ಮಾದಸ್ಯಪ್ರದಾನೇನ ಪ್ರೀತೋಭವತು ಮಾಧವಃ ||೧||
ಅರ್ಜಿತಂ ಪ್ರತಿಗೃಹ್ಣೀಯಾತ್‌ದದ್ಯಾತ್ ಅರ್ಜಿತ ಮೇವವಾ !
ತಾವುಭೌ ಪುಣ್ಯಕರ್ಮಾಣೌ ನರಕೀಕ್ರಯ ವಿಕ್ರಯೀ ||೨||

ನಿಜವಾದ ಸಾಲಿಗ್ರಾಮದಲ್ಲಿ ಹದಿನಾಲ್ಕು ಲೋಕಗಳು ವಾಸವಾಗಿರುವವು. ಆದ್ದರಿಂದ ಇವುಗಳನ್ನು ದಾನಮಾಡುವದರಿಂದ ವಿಷ್ಣು ಪರಮಾತ್ಮನು ಸಂತುಷ್ಟನಾಗುವನು. ಪೂಜಿಸುವದಕ್ಕಾಗಿ ಸ್ವೀಕರಿಸಬಹುದು ಮತ್ತು ದಾನಕೊಡತಕ್ಕವನು ಸಾಲಿಗ್ರಾಮವನ್ನು ಪೂಜೆ ಮಾಡುವದಕ್ಕಾಗಿಯೇ ಕೊಡತಕ್ಕದ್ದು. ಹೀಗೆ ದಾನ ಕೊಡುವದು ಮತ್ತು ಸ್ವೀಕರಿಸುವದು ಇವೆರಡೂ ಪುಣ್ಯಕರ್ಮಗಳು ಆದರೆ ಸಾಲಿಗ್ರಾಮವನ್ನು

ಮಾರಾಟ ಮಾಡುವದು ಅಥವಾ ಖರೀದಿಗೆ ತೆಗೆದುಕೊಳ್ಳುವದು ಇವೆರಡೂ ನರಕ ಭಾಜನ ಕ್ರಿಯೆಗಳು.

### ಬ್ರಹ್ಮಚಾರಿ, ಗೃಹಸ್ಥ ಸನ್ಯಾಸಿಗಳು ಪೂಜಿಸುವ ಸಾಲಿಗ್ರಾಮಗಳು

ಬ್ರಹ್ಮಚಾರೀ ಚಸನ್ಯಾಸೀ ಬಹುಚಕ್ರಂಪ್ರ ಪೂಜಯೇತ್ ।
ಪಂಕಾಭಂ ಬರ್ಬರಂಚೈವ ಮೃಗೇಂದ್ರ ಸದೃಶಾ ಕೃತಿಮ್ ||೧||
ಭೀಷಣಾಸ್ಯಂ ವಹ್ನಿನಿಭಂ ಯತಿ ಸಂಪೂಜಯೇತ್ ಮುನೇ ।
ಸೌಮ್ಯಶ್ಚೇದ್ ಗೃಹಿಭಿಃ ಪೂಜ್ಯ ಹ್ಯೋನ್ಯಥಾ ಪೂಜನಂನಹಿ||೨।

ಬಹುಚಕ್ರಗಳುಳ್ಳ ಸಾಲಿಗ್ರಾಮಗಳನ್ನು ಬ್ರಹ್ಮಚಾರಿಗಳು ಮತ್ತು ಯತಿ (ಸನ್ಯಾಸಿ) ಗಳು ಪೂಜಿಸಬೇಕು. ಕೆಸರಿನಕಾಂತಿಯುಳ್ಳ ಸಿಂಹದಂತಹ ಮುಖವುಳ್ಳ, ಭಯಂಕರಾಕೃತಿಯು ಅಗ್ನಿ ಯಂತಿರುವ ಸಾಲಿಗ್ರಾಮಗಳನ್ನು ಯತಿಗಳು (ಸನ್ಯಾಸಿಗಳು) ಪೂಜಿಸಬೇಕು. ಸೌಮ್ಯ ಸ್ವರೂಪದ ಮಂಗಲಕರವಾದ ಸಾಲಿಗ್ರಾಮಗಳನ್ನು ಗೃಹಸ್ಥರು ಪೂಜಿಸಬೇಕು.

### ಮನೆಯಲ್ಲಿ ಪೂಜಿಸುವ ಶಿವಲಿಂಗ ಹಾಗೂ ಸಾಲಿಗಾಮಗಳ ಸಂಖ್ಯೆ–

ಗೃಹೇಲಿಂಗಂದ್ವಯಂ ನಾರ್ಚ್ಯಂ ಸಾಲಿಗ್ರಾಮದ್ವಯಂತಥಾ ।
ದ್ವೇಚಕ್ರೇ ದ್ವಾರಕಾಯಾಸ್ತು ನಾರ್ಚ್ಯಂ ಸೂರ್ಯದ್ವಯಂತಥಾ ||೧||
ಗಣೇಶ ಶಕ್ತಿ ತ್ರಿತಯಂ ದ್ವೌಶಂಖೌನೈವ ಪೂಜಯೇತ್ ||
ಭಗ್ನಾಂಚ ಪ್ರತಿಮಾಂಚೈವ ಮತ್ಸ್ಯಾದಿ ದಶಕಂತಥಾ ||೨||
ಗೃಹೇಗ್ನಿದಗ್ಧ ಭಗ್ನಾಶ್ಚ ನಾರ್ಚ್ಯಾಲೋಕ್ಯೈ ವಸುಂಧರೇ ।
ಏತಾಸಾಂ ಪೂಜನಾನ್ನಿತ್ಯ ಮುದ್ವೇಗಂ ಪ್ರಾಪ್ನುಯಾತ್ ಗೃಹೀ||೩||
ಸಾಲಿಗ್ರಾಮಾಃ ಸಮಾಃ ಪೂಜ್ಯಾಸ್ಸಮೇಷು ದ್ವಿತಯಂನಾಹಿ ।
ವಿಷಮಾನ್ನೈವ ಪೂಜ್ಯಾಸ್ತು ವಿಷಯೆಷ್ವೇಕ ಏವಹಿ ||೪||

ಒಂದುಮನೆಯಲ್ಲಿ ಎರಡು ಶಿವಲಿಂಗಗಳನ್ನು ಪೂಜಿಸಬಾರದು ಅದರಂತೆ ಎರಡು ಸಾಲಿಗ್ರಾಮಗಳನ್ನೂ ಪೂಜಿಸ ಬಾರದು, ಸಾಲಿಗ್ರಾಮದ ದ್ವಾರದಲ್ಲಿ ಎರಡು ಚಕ್ರಗಳಿದ್ದರೆ ಅಥವಾ ಎರಡು ಸೂರ್ಯಗಳ ಚಿಹ್ನಗಳಿದ್ದರೆ



ಆ ಸಾಲಿಗ್ರಾಮವು ಪೂಜೆಗೆ ಅಯೋಗ್ಯವು. ಗಣಪತಿ ಅಥವಾ ಮೂರು ಶಕ್ತಿ ದೇವತೆಗಳಿದ್ದರೆ ಮತ್ತು ಎರಡುಶಂಖ ಗಳಿದ್ದರೆ ಅವುಗನ್ನು ಪೂಜೆ ಮಾಡ ಬಾರದು, ಒಡೆದ ಪ್ರತಿಮೆಗಳನ್ನು, ಮತ್ಸ್ಯಮೊದಲಾದ ಹತ್ತು ಪ್ರತಿಮೆ ಗಳೂ ಸಹ ಅವು ಭಿನ್ನವಾಗಿದ್ದರೆ ಅವನ್ನು ಪೂಜಿಸಬಾರದು. ಸುಟ್ಟಿದ್ದರೆ ಭಿನ ವಾಗಿದ್ದರೆ, ಅಂಥ ಪ್ರತಿಮೆಗಳನ್ನು ಪೂಜಿಸಬಾರದು ಒಂದುವೇಳೆ ಪೂಜಿಸಿದರೆ ದುಃಖವನ್ನು ಹೊಂದುವರು. ಸಾಲಿಗ್ರಾಮಗಳನ್ನು ಸಮ ಅಂಕೆಯ ಲ್ಲಿದ್ದರೆ ಪೂಜಿಸಬಹುದು. ಆದರೆ ಎರಡು ಸಮ ಆದಾಗ್ಯೂ ಎರಡು ಸಾಲಿ ಗ್ರಾಮಗಳನ್ನು ಪೂಜಿಸಬಾರದು ನಾಲ್ಕು, ಆರು, ಎಂಟು, ಹತ್ತು, ಹೀಗೆ ಸಮ ಅಂಕೆಗಳ ಸಾಲಿಗ್ರಾಮಗಳನ್ನು ಪೂಜಿಸಬಹುದು) ಆದರೆ ಮೂರು ಐದು ಏಳು,ಒಂಭತ್ತು,ಹೀಗೆ ವಿಷಮ ಅಂಕೆಗಳ ಸಾಲಿಗ್ರಾಮಗಳನ್ನುಪೂಜಿಸಬಾರದ ಒಂದು ಇದು ವಿಷಮ ಅಂಕೆಯೊದರೂ ಒಂದು ಸಾಲಿಗ್ರಾಮಪೂಜಿಸಬೇಕು.

### ಸಾಲಿಗ್ರಾಮ ತೀರ್ಥಪ್ರಾಶನ

ಸಾಲಿಗ್ರಾಮ ಶಿಲಾ ತೋಯಂಯಃ ಪಿಬೇತ್ ವಿಷ್ಣು ಸನ್ನಿಧೌ !
ಸರ್ವಪಾಪ ವಿನಿ ರ್ಮುಕ್ತೋ ವಿಷ್ಣು ಸಾಯುಜ್ಯ ಮಾಪ್ನುಯಾತ್ ||

ಸಾಲಿಗ್ರಾಮದ ತೀರ್ಥವನ್ನು ವಿಷ್ಣು ಸನ್ನಿಧಿಯಲ್ಲಿ ಪಾನ ಮಾಡುವವನು ಸಮಸ್ತ ಪಾಪಗಳು ಪರಿಹಾರವಾಗುವವಲ್ಲದೆ ಆತನು ವಿಷ್ಣುಸಾಮುಜ್ಯ ಪದವಿಯನ್ನು ಪಡೆಯುವನು. (ಎಂಬುದಾಗಿ ನೃಸಿಂಹ ಪುರಾಣದಲ್ಲಿ ಉಕ್ತವಾಗಿದೆ)

### ಸಾಲಿಗ್ರಾಮ ಲಕ್ಷಣಾಧ್ಯಾಯ ಶ್ರವಣ ಫಲ–

ನಾರದ್ಯಾದ್ಯನುಯೂ ಪ್ರೋಕ್ತಂ ಸಾಲಿಗ್ರಾಮಸ್ಯ ವೈಭವಮ್ ।
ಧಾರ್ಯಂಚ ಮುನಿನಾ ಭಕ್ತ್ಯಾ ಲಕ್ಷ್ಮೀಪತಿ ಮುದೇಸದಾ ||೧||
ಶೃಣು ಯಾದಿ ಮಮಧ್ಯಾಯಂ ಸಾಲಿಗ್ರಾಮ ಗುಣಾನ್ವಿತಮ್ ।
ಧರ್ಮಾರ್ಥಕಾಮ ಮೋಕ್ಷಾರ್ಥಂಭಕ್ತಿಮಾನ್ಯಸ್ಸಮೇ ಪ್ರಿಯಃ ।೨।
ಸಾಯಂಪ್ರಾತಃ ಪಠೇನ್ನಿತ್ಯಂ ಸಾಲಿಗ್ರಾಮಸ್ಯ ವೈಭವಮ್ ।
ಶ್ರಾದ್ಧಕಾಲೇ ವಿಶೇಷೇಣ ಪಿತೄಣಾಂ ದತ್ತಮಕ್ಷಯಮ್ ||೩||

ಶೃತ್ವೇತ್ಥಂ ದ್ರುಹಿಣಮುಖೇರಿತಂಚ ಸಾಲಿಗ್ರಾಮಸ್ಯ ಪ್ರಭವ ಮಖಂಡ
ಪಾತಕಘ್ನಂ ಪ್ರಾಣಾಂ ಸೀತ್ಪದ ಯುಗ ಪಂಕಜೇವಿಧಾತು ಸ್ತತ್
ಪೂಜಾಮ ಕುರುತ ನಾರದೋಪಿಭಕ್ತ್ಯಾ ||೪||

**ನಾರದಉವಾಚ**– ಸಾಲಿಗ್ರಾಮಶಿಲಾಭೇದ ಲಕ್ಷಣಂ ಮೂರ್ತಿ |
ನಿರ್ಣಯಃಕಥಿತೋಭವತಾ ಬ್ರಹ್ಮನ್ ಕ್ಷೇತ್ರವರ್ಣಂ ಶುಭಾಶುಭಮ್||೫|

## ಬ್ರಹ್ಮೋಉವಾಚ

ಶೃಣುನಾರದ ವಕ್ಷ್ಯಾಮಿ ಯನ್ಮೋಕ್ತಂ ಪರಿಪೃಚ್ಛಸಿ||

ಈ ಸಾಲಿಗ್ರಾಮಗಳ ಅಧ್ಯಾಯವನ್ನು ಪ್ರಾತಃಕಾಲ ಸಾಯಂಕಾಲಗಳಲ್ಲಿ ಭಕ್ತಿಯಿಂದ ಓದಿದರೆ ಅಥವಾ ಶ್ರವಣಮಾಡಿದರೆ, ಧರ್ಮ, ಅರ್ಥ, ಕಾಮ, ಮೋಕ್ಷಫಲಗಳು ಪ್ರಾಪ್ತವಾ ಗುವವು. ಪಿತೃಗಳಶ್ರಾದ್ಧ ಕಾಲದಲ್ಲಿ ಸಾಲಿಗ್ರಾಮಗಳ ವೈಭವದ ಅಧ್ಯಾಯವನ್ನು ಓದುವದರಿಂದ, ಅಥವಾ ಶ್ರವಣ ಮಾಡುವದರಿಂದ ವಿಶೇಷ ಮಅಖಂಡ ಪಾಪವು ಫಲವು ಮತ್ತು ಅವರಿಗೆ ಅಕ್ಷಯ ನಾಶವಾಗುವದು. ಫಲವುಂಟಾಗದು.

## ಸಾಲಿಗ್ರಾಮಗಳ ಬೇರೆಬೇರೆ ಬಣ್ಣಗಳ ಫಲ

ಸಾಲಿಗ್ರಾಮ ಶಿಲಾ ಗ್ರಾಹ್ಯಾಮಂಗಲಾ ದೇಶಕಾಲ ತಃ|
ಶ್ಯಾಮಂ ಕೃಷ್ಣಂಚ ನೀಲಂಚ ತಥಾ ಪೈತೀತ ವರ್ಣಕಂ ||೧||
ಪಾಂಡುರಂ ರಕ್ತ ವರ್ಣಂಚ ಕಪಿಲಂ ಶುಕ್ಲ ವರ್ಣಕಮ್ |
ಧೂಮ್ರ ವರ್ಣಂತ ಥಾದಗ್ಧ ಮಿತಿ ನಾನಾ ವಿಧಾ ಶ್ಶಿಲಾಃ ||೨||
ಪತ್ನಿ ಘ್ನೀಕಪಿಲಾ ಪ್ರೋಕ್ತಾ ನೀಲಾ ಲಕ್ಷ್ಮೀಪ್ರದಾ ಸ್ಮೃತಾ |
ಪುಷ್ಟಿ ವೃದ್ಧಿಪ್ರದಾ ಶ್ಯಾಮಾಶುಕ್ಲಾ ಮೋಕ್ಷಪ್ರದಾಯಿನೀ ||೩||
ಪೀತಾಧನಕರೀ ಜ್ಞೇಯೂರಕ್ತಾ ರಾಜ್ಯ ಕರೀಸ್ಮೃತಾ |
ಅತಿ ರಕ್ತಾ ಮೃತ್ಯುಕರೀ ಕೃಷ್ಣಾ ಕೀರ್ತಿ ಪ್ರದಾಯಿನೀ ||೪||
ಧೂಮ್ರವರ್ಣಾಮಹಾದುಃಖಂದಾರಿದ್ರ್ಯಂದ ದತೀಶಿಲಾ ||

ಸಾಲಿಗ್ರಾಮಗಳ ಶಿಲೆಗಳ ಬಣ್ಣಗಳ ಫಲ ಈ ಪ್ರಕಾರ ಅದೆ– ಶಾಮ, ಕೃಷ್ಣ,



ನೀಲಿ ಪೀತ (ಹಳದಿ ಪಾಂಡು, ರಕ್ತವರ್ಣ, ಕಪಿಲ (ಮಾಸದ) ಬಿಳಿ ಧೂಮ್ರ (ಹೊಗೆ) ದಗ್ಧ (ಸುಡಲ್ಪಟ್ಟವು) ಈ ಪ್ರಕಾರ ಬೇರೆ ಬೇರೆ ಬಣ್ಣಗಳ ಸಾಲಿಗ್ರಾಮಗಳು ಇರುವವು ಕಪಿಲ. ಬಣ್ಣದ ಸಾಲಿಗ್ರಾಮವು ಪತ್ನೀ ನಾಶಕವು ನೀಲಬಣ್ಣದ ಸಾಲಿಗ್ರಾಮವು ಲಕ್ಷ್ಮೀಪ್ರದವು. ಶಾಮಲ ವರ್ಣದ ಸಾಲಿಗ್ರಾಮವು ಪುಷ್ಟಿಕರವು ವೃದ್ಧಿಪ್ರದವು ಬಿಳಿ ಬಣ್ಣದ ಸಾಲಿಗ್ರಾಮವು ಮೋಕ್ಷದಾಯಕವು. ಹಳದಿ ಬಣ್ಣದ ಸಾಲಿಗ್ರಾಮವು ಧನ ಸಂಗ್ರಹ ವನ್ನುಂಟು ಮಾಡುವದು. ರಕ್ತ (ಕೆಂಪು) ಬಣ್ಣದ ಸಾಲಿಗ್ರಾಮವು ರಾಜ ಸಂಪದವು. ಅಧಿಕ ಕೆಂಪು ಬಣ್ಣದ ಸಾಲಿಗ್ರಾಮವು ಮೃತ್ಯುಪ್ರದವು ಕೃಷ್ಣವರ್ಣವಾದ ಸಾಲಿಗ್ರಾಮವು ಕೀರ್ತಿಪ್ರದವು. ಧೂಮ್ರ ವರ್ಣದ ಸಾಲಿಗ್ರಾಮವು ಅಧಿಕದುಃಖದಾಯಕವು. ಹಾಗೂ ದಾರಿದ್ರ್ಯವನ್ನೂ ಉಂಟು ಮಾಡುವದು.

**ಬೇರೆ ಬೇರೆ ಬಣ್ಣದ ಸಾಲಿಗ್ರಾಮಗಳ ಕ್ಷೇತ್ರಗಳು(ಸ್ಥಾನಗಳು)**

ಕಪಿಲೋನಾರ ಸಿಂಹಸ್ಯ ತದಸ್ಯಾಭಸ್ತು ವಾಮನಃ.
ವಾಸುದೇವಸ್ಸಿ ತೋಜ್ಞೇಯೋ ರಕ್ತ ಸ್ಸಂಕರ್ಷಣ ಸ್ಮೃತ್ಯಃ ||೧||
ದಾಮೋದರಸ್ತು ನೀಲಾಭ ಅನಿರುದ್ಧ ಸ್ತಥೈವಚ |
ಶ್ಯಾಮೋನಾರಾಯಣೋದೇವಃ ಕೃಷ್ಣೋ ವೈಷ್ಣವ ಉಚ್ಯತೇ ||೨||
ಬಹುವರ್ಣ ಅನಂತಶ್ಚ ಶ್ರೀಧರಃ ಪೀತಉಚ್ಚ್ಯತೇ |
ಪಾಂಡುರೋ ವಾಸುದೇವಶ್ಚ ಶುಕ್ಲಶುಕ್ಲ ಅಧೋಕ್ಷಜಃ ||೩||
ಮಧುಪಿಂಗಲವರ್ಣಾಯಾ ಬ್ರಹ್ಮ ಮೂರ್ತಿರಿತಿಸ್ಮೃತಾ||
ಮಯಾಕ್ಷೇತ್ರಸ್ಯ ಕಥಿತೋವಿಸ್ತಾರೋಮುನಿ ಪುಂಗವ ||೪||

ಕಪಿಲ (ಮಾಸಿದ)ಬಣ್ಣವುನರಸಿಂಹ ಸಾಲಿಗ್ರಾಮದ ಕ್ಷೇತ್ರವು ಅಗಸಿ ಹೂವಿನ ಬಣ್ಣವು ವಾಮನ ಸಾಲಿಗ್ರಾಮದ. ಕ್ಷೇತ್ರವು.ಬಿಳಿಯಬಣ್ಣವು ವಾಸುದೇವ ಸಾಲಿಗ್ರಾಮದ ಕ್ಷೇತ್ರವು ಕೆಂಪು ಬಣ್ಣದ ಸಾಲಿಗ್ರಾಮವು ಸಂಕರ್ಷಣ ಸಾಲಿಗ್ರಾಮದ ಕ್ಷೇತ್ರವು. ನೀಲಿಬಣ್ಣವು. ದಾಮೋದರ ಸಾಲಿ

ಗ್ರಾಮಕ್ಷೇತ್ರವು. ಮತ್ತು ಅನಿರುದ್ಧ ಸಾಲಿಗ್ರಾಮದ ಕ್ಷೇತ್ರವು. ಶ್ಯಾಮ ಬಣ್ಣವು ನಾರಾಯಣ ಸಾಲಿಗ್ರಾಮದ ಕ್ಷೇತ್ರವು ಕೃಷ್ಣ (ಕಪ್ಪು) ಬಣ್ಣವು ವೈಷ್ಣವ ಸಾಲಿಗ್ರಾಮದ ಕ್ಷೇತವು ಬಹಳಬಣ್ಣಗಳುಅನಂತ ಸಾಲಿಗ್ರಾಮದ ಕ್ಷೇತ್ರವು. ಹಳದಿಬಣ್ಣವು ಶ್ರೀಧರ ಸಾಲಿಗ್ರಾಮದ ಕ್ಷೇತ್ರವು. ಪಾಂಡು ಬಣ್ಣವು. ವಾಸುದೇವ ಸಾಲಿಗ್ರಾಮದ ಕ್ಷೇತ್ರವು. ಬಹಳ ಬೆಳ್ಳಗಿರುವ ಸಾಲಿಗ್ರಾಮಕ್ಕೆಅಧೋಕ್ಷಜ ವೇಕ್ಷೇತ್ರವುಜೇನು ತುಪ್ಪದಂತ ಹಪಿಂಗಲಬಣ್ಣವು ಬ್ರಹ್ಮ ಮೂರ್ತಿಸಾಲಿಗ್ರಾಮದ ಕ್ಷೇತ್ರವು. ಈ ಪ್ರಕಾರ ಆಯಾಸಾಲಿಗ್ರಾಮಗಳ ಕ್ಷೇತ್ರಗಳು.





# ಶ್ರೀ ರುದ್ರಾಕ್ಷಿ ಮಹಾತ್ಮೆ ಬರೆಯುವದಕ್ಕೆ

ಶುಭ ಮಸ್ತು

## ರುದ್ರಾಕ್ಷಿ ಮಹಾತ್ಮೆ

ಭಾರತೀಯ ಸಂಸ್ಕೃತಿಯಲ್ಲಿ ರುದ್ರಾಕ್ಷಿ ಧಾರಣೆಗೆ ಬಹಳ ಹೆಚ್ಚಿನ ಪ್ರಾಧಾನ್ಯತೆ ಇದೆ. ಜಾತಿ, ಮತ, ಪಂಥಗಳ ಭೇದಭಾವ ವಿಲ್ಲದೆ ಸಮಸ್ತ ಮಾನವರು ರುದ್ರಾಕ್ಷಿ ಧಾರಣೆಮಾಡಿ ಮಹತ್ತಾದ ಫಲ ಪಡೆಯಬಹುದು. ರುದ್ರಾಕ್ಷಿಯು ಇಹಲೋಕ. ಪರಲೋಕಗಳ ಸುಖಗಳೆರಡಕ್ಕೂ ಫಲ ಕೊಡುವ ಸಾಧನ ಸಂಪತ್ತಾಗಿದೆ.

### ಸ್ಕಂದ ಪುರಾಣದಲ್ಲಿ

ಲಕ್ಷಂತು ದರ್ಶನಾತ್ ಪುಣ್ಯಂ ಕೋಟಿ ಸಂ ಸ್ಪರ್ಶನಾದಪಿ ।
ದಶಕೋಟಿ ಶತಂಪುಣ್ಯಂ ಧಾರಣಾತ್‌ಲಭತೇ ನರ ಃ ॥

ರುದ್ರಾಕ್ಷಿಯ ದರ್ಶನದಿಂದ ಲಕ್ಷ ಪುಣ್ಯವೂ, ಸ್ಪರ್ಶಮಾಡುವದರಿಂದ ಕೋಟಿ ಪುಣ್ಯವೂ, ಧಾರಣೆ ಮಾಡುವದರಿಂದ ಹತ್ತು ಕೋಟಿ, ನೂರು ಕೋಟಿ ಪುಣ್ಯವೂ ಲಭಿಸುವದೆಂದು ಸ್ಕಂದ ಪುರಾಣದಲ್ಲಿ ಉಕ್ತವಾಗಿದೆ.

### ಕೂರ್ಮ ಪುರಾಣದಲ್ಲಿ

ಹಸ್ತ ಚೋರಸ್ಯ ಕಂಠೇವಾ ಮಸ್ತಕೇವಾಪಿ ಧಾರಯೇತ್ ।
ಮುಚ್ಯತೇ ಸರ್ವಪಾಪೇ ಭ್ಯ ಃ ಸರುದ್ರೋನಾತ್ರ ಸಂಶಯ ಃ ॥

ರುದ್ರಾಕ್ಷಿಗಳನ್ನು ಹಸ್ತ, ಕಂಠ, ಮಸ್ತಕಗಳಲ್ಲಿ ಧರಿಸುವದರಿಂದ ಮನುಷ್ಯರು ಸರ್ವಪಾಪಗಳಿಂದ ಮುಕ್ತರಾಗುವರಲ್ಲದೆ ಪ್ರತ್ಯಕ್ಷ ರುದ್ರ (ಶಿವನೇ) ಆಗುವನೆಂದುಕೂರ್ಮಪುರಾಣದಲ್ಲಿ ಉಕ್ತವಾಗಿದೆ.

### ಲಿಂಗ ಪುರಾಣದಲ್ಲಿ

ಧ್ಯಾನ ಧಾರಣ ಹೀನೋಽಪಿ ರುದ್ರಾಕ್ಷಂ ಯೋಹಿಧಾರ ಯೇತ್
ಸರ್ವಪಾಪ ವಿನಿರ್ಮುಕ್ತ ಃ ಸ್ವಯಾತಿ ಪರಮಂಗತಿಂ ॥

ರುದ್ರಾಕ್ಷಿಗಳನ್ನು ಧಾರಣ ಮಾಡಿದವರು. ದೇವತಾ ಪೂಜಾ ಧ್ಯಾನ ವೆಗೈರೆ ಏನೂಮಾಡದಿದ್ದರೂ ಸಹ ಅವರು ಸರ್ವಪಾಪಗಳಿಂದ ಮುಕ್ತರಾಗಿ ಮೋಕ್ಷವನ್ನು ಪಡೆಯುವರು ಎಂಬುದಾಗಿ ಲಿಂಗ ಪುರಾಣದಲ್ಲಿದೆ.

**ಲೈಂಗ ಪುರಾಣದಲ್ಲಿ**

ಖಾದನ್ ಮಾಂಸಂ ಪಿಬನ್‌ಮದ್ಯ ಸಂಗ ಚ್ಛನ್ನಂತ್ಯ ಜೇಷ್ವಪಿ।
ಸದ್ಯೋಭವತಿ ಪೂತಾತ್ಮಾ ರುದ್ರಾಕ್ಷೇ ಶಿರಸಿಸ್ಥಿತೇ ॥

ಮಾಂಸವನ್ನು ತಿಂದು ಮದ್ಯವನ್ನು ಕುಡಿಯುತ್ತಿರುವ ಅಂತ್ಯಜನಾದರೂ ಸಹ ತನ್ನ ಶಿರಸ್ಸಿನಲ್ಲಿ ರುದ್ರಾಕ್ಷಿಯನ್ನುಧಾರಣ ಮಾಡಿದರೆ ಅವನು ಪವಿತ್ರ ನಾಗುವನೆಂದುಲೈಂಗ ಪುರಾಣದಲ್ಲಿದೆ.

ರುದ್ರಾಕ್ಷಮಾಲಿಕಾ ಕಂಠೇ ಧಾರಸದ್ಭಕ್ತಿ ವರ್ಜಿತ ಃ ।
ಪಾಪಕರ್ಮಾಪಿ ಯೋನಿತ್ಯಂ ರುದ್ರಲೋಕ ಮಹೀಯತೇ
"(ಲೈಂಗ ಪುರಾಣ)"

ಕಂಠದಲ್ಲಿ ರುದ್ರಾಕ್ಷಿಗಳನ್ನು ಧರಿಸಿಕೊಂಡು ಭಕ್ತಿಹೀನನಾಗಿ ನಿತ್ಯವೂ ಪಾಪಕರ್ಮಗಳನ್ನು ಮಾಡುತ್ತಿದ್ದರೂ ಸಹ ಅವನು ರುದ್ರಲೋಕವನ್ನು ಹೊಂದುವನು.

ಸ್ಕಂದ ಪುರಾಣದಲ್ಲಿ—ರುದ್ರಾಕ್ಷಂ ಕಂಠ ಮಾಶ್ರಿತ್ಯ ಶ್ವಾನೋಪಿ ಮ್ರಿಯತೇಯದಿ ।
ಸೋಪಿರುದ್ರ ಸಮಾಪ್ನೋತಿ ಕಿಂಪುನರ್ ಮಾನುಷಾದಯಾ ॥

ರುದ್ರಾಕ್ಷಿಯನ್ನು ಧರಿಸಿಕೊಂಡ ನಾಯಿಯೂ ಸಹ ರುದ್ರಲೋಕವನ್ನು ಸೇರುತ್ತಿರಲು ಮನುಷ್ಯರು ರುದ್ರಾಕ್ಷಿ ಧಾರಣ ಮಾಡಿಕೊಂಡರೆ ರುದ್ರಲೋಕವನ್ನು ಪಡೆಯಲಾರರೇ ?

ಶುಚಿರ್ವಾಪ್ಯ ಶುಚಿರ್ವಾಪಿ ಅಭಕ್ಷ್ಯಾಚ ಭಕ್ಷಣಾತ್ ।
ಅಗಮ್ಯಾಗಮನಂ ಚೈವ ಬ್ರಹ್ಮಹಾ ಗುರುತಲ್ಪಕೋಪಿ ॥
ಮ್ಲೇಂಛೋವಾ ಪ್ಯಥ ಚಾಂಡಾಲೋಯುಕ್ತೋವಾ ಪೃಥಾ ।
ಪಾತಕೈ ರುದ್ರಾಕ್ಷ ಧಾರಣಾ ದ್ಯಸ್ತುರಸುದ್ರೋನಾತ್ರ ಸಂಶಯಃ॥
ಬ್ರಹ್ಮಹಾ ಮದ್ಯಪಾಯೀ ಚ ಸ್ವರ್ಣಹೃದ್ಗುರು ತಲ್ಪಗ ಃ ॥



ಮಾತೃಹಾ ಪಿತೃಹಾ ಭ್ರೂಣಹಾ ಕೃತ ಘಾತಕ ಃ ।
ರುದ್ರಾಕ್ಷ ಧಾರಣಾ ದೇವ ಮುಚ್ಯಂತೇ ಸರ್ವಪಾತಕೈ ಃ ।
ದರ್ಶನಾತ್ ಸ್ಪರ್ಶನಾಚ್ಚೈವ ಸ್ಮರಣಾದಪಿ ಪೂಜನಾತ್ ।
ರುದ್ರಾಕ್ಷ ಧಾರಣಾ ಲ್ಲೋಕೇ ಮುಚ್ಯಂತೇ ಪಾತಕೈ ರ್ಜನಾ ಃ ।

ಯಾರು ಸದಾವಕಾಲದಲ್ಲಿ ರುದ್ರಾಕ್ಷಿಗಳನ್ನು ಧರಿಸುತ್ತಿದ್ದಾರೆ. ಅವರು ಶುಚಿಯಾಗಿರಲಿ ಅಶುಚಿಯಾಗಿರಲಿ, ತಿನ್ನ ಬಾರದ್ದನ್ನು ತಿನ್ನುತ್ತಿರಲಿ, ಗುರು ತಲ್ಪಗಾಮಿಯಾಗಿರಲಿ ಮ್ಲೇಂಛನಾಗಿರಲಿ ಚಾಂಡಾಲನಾಗಿರಲಿ, ಬ್ರಹ್ಮ ಹತ್ಯೆಯನ್ನು ಮಾಡಿದವನಾಗಿರಲಿ, ಮದ್ಯಪಾನಮಾಡುತ್ತಿರಲಿ, ಬಂಗಾರ ಕಳ್ಳನಾಗಲಿ ಮಾತೃಹತ್ಯೆ, ಪಿತೃಹತ್ಯೆ, ಭ್ರೂಣಹತ್ಯೆ ಮಾಡಿರಲಿ ಕೃತಘ್ನ ನಾಗಿರಲಿ ಇವರೆಲ್ಲರೂ ರುದ್ರಾಕ್ಷಿ ಧಾರಣ ಮಾತ್ರದಿಂದ ಸರ್ವಪಾಪಗಳಿಂದ ಬಿಡುಗಡೆ ಹೊಂದುವರು ರುದ್ರಾಕ್ಷಿದರ್ಶನದಿಂದ, ಸ್ಪರ್ಶದಿಂದ ಸ್ಮರಣೆಯಿಂದ, ಪೂಜೆಯಿಂದ ಧಾರಣೆಯಿಂದ ಎಲ್ಲಪಾಪಗಳಿಂದ ವಿಮುಕ್ತರಾಗುವರು

ರುದ್ರಾಕ್ಷ ಧಾರಣಾತ್ ಸದ್ಯಃ ಸರ್ವಪಾಪೈ ಃ ಪ್ರಮುಚ್ಯತೇ
ರುದ್ರಾಕ್ಷಿಗಳನ್ನು ಧರಿಸುವವನು ಸರ್ವಪಾಪಗಳಿಂದಲೂ
ಬಿಡಲ್ಪಡುವನು ಎಂದುಜಾಬಾಲೋಪನಿಷತ್ತಿನಲ್ಲಿಹೇಳಲ್ಪಟ್ಟಿದೆ.
ರುದ್ರಾಕ್ಷಿಯ ಧರಿಸಿಪ್ಪಾತನೇ ರುದ್ರನು
ಆತನ ಭವರೋಗಗಳು ಜೊದ್ದಲಮ್ಮವು ನೋಡಾ
"ಏವರುದ್ರಾಕ್ಷ ಧಾರಣರುದ್ರಾ" ಎಂದುದು ಶ್ರುತಿ
ರುದ್ರಾಕ್ಷಿಯ ಧರಿಸಿಪ್ಪ ಶರಣರಿಗೆ ಶರಣೆಂದು ಬದುಕಿದೆನು ಕಾಣಾ
ಅಪ್ರಮಾಣ ಕೂಡಲಸಂಗಮದೇವಾ ॥

ಎಂಬ ಶರಣರ ನುಡಿಗಡಣದಂತೆ ಕಲಿಕಾಲದ ಕರ್ಮಹರಣ ಮಾಡಿಕೊಳ್ಳಬೇಕಾದರೆ ಕಾಲಕಾಲೇಶ್ವರನಾದ ಶಿವನ ನೇತ್ರದಿಂದ ಹುಟ್ಟಿದ ಪವಿತ್ರವಾದ ರುದ್ರಾಕ್ಷಿಯ ಧಾರಣೆಯನ್ನು ಅವಶ್ಯವಾಗಿ ಮಾಡಿಕೊಳ್ಳಬೇಕು. ಚಿತ್ತ ಚಂಚಲತೆಯನ್ನು ಕಳೆದು ಮಾನವರನ್ನು ಭಾವಶುದ್ಧರನ್ನಾಗಿ ಮಾಡುವ ಮಹಾಶಕ್ತಿಯುತವಾದ ರುದ್ರಾಕ್ಷಿಯು ಇಹಪರಗಳೆರಡಕ್ಕೂ ಗತಿಮತಿಯ ನೀಡಿ. ಸಕಲ ಸುಖಸಂಪದವನ್ನಿತ್ತು ಮುಕ್ತಿ ಮಾರ್ಗವ ತೋರಿಸುವ

ಚೇತನ ಶಕ್ತಿಯಾಗಿರುವ ರುದ್ರಾಕ್ಷಿಯ ಮಹಿಮೆಯನ್ನು ಸಹಸ್ರ ಮುಖದ ಆದಿಶೇಷನಿಂದಲೂ ವರ್ಣಿಸಲು ಸಾಧ್ಯವಾಗುವದಿಲ್ಲ.

**ಸಿದ್ಧಾಂತಶಿಖಾಮಣಿಯಲ್ಲಿ**

ಬ್ರಾಹ್ಮಣೋವಾsಂತ್ಯಜೋವಾಪಿಮೂರ್ಖೋವಾ ಪಂಡಿತೋsಪಿವಾ।
ರುದ್ರಾಕ್ಷಿ ಧಾರಣಾದೇವ ಮುಚ್ಯತೇ ಸರ್ವಪಾತಕೈ ಃ ॥
ಗವಾಂಕೋಟಿ ಪ್ರದಾನಸ್ಯಯತ್ಫಲಂ ಭುವಿಲಭ್ಯತೇ ।
ತತ್ಫಲಂಲಭತೇ ಮರ್ತ್ಯೋ ನಿತ್ಯಂ ರುದ್ರಾಕ್ಷ ಧಾರಣಾತ್ ॥
ಮೃತಿಕಾಲೇ ತುರುದ್ರಾಕ್ಷಂ ನಿಷ್ಪೀಡ್ಯ ಸಹವಾರಿಣಾಂ ।
ಯ ಃ ಪಿಬೇಚ್ಚಿಂತಯನ್‌ರುದ್ರಂ ರುದ್ರಲೋಕಂ ಸಗಚ್ಛತಿ ॥
ಭಸ್ಮೋದ್ಧೂಲಿತ ಸರ್ವಾಂಗಾ ಧೃತ ರುದ್ರಾಕ್ಷ ಮಾಲಿಕಾ ಃ ।
ಯೇಭವಂತಿ ಮಹಾತ್ಮಾನೋ ರುದ್ರಾಸ್ತೇ ನಾತ್ರ ಸಂಶಯ ಃ ॥

ನಿತ್ಯಾನಿ ಕಾಮ್ಯಾನಿ ನಿಮಿತ್ತಜಾನಿ
ಕರ್ಮಾಣಿ ಸರ್ವಾಣಿ ಸದಾಪಿಕುರ್ವನ್ ।
ನಭಸ್ಮ ರುದ್ರಾಕ್ಷ ಧರೋಯದಿ ಸ್ಯಾತ್
ದ್ವಿಜೋನ ತಸ್ಯಾಸ್ತಿ ಫಲೋಪಪತ್ತಿ ಃ ॥೧॥

ಬ್ರಾಹ್ಮಣನಾಗಲಿ ಅಂತ್ಯಜನಾಗಲಿ, ಮೂರ್ಖನಾಗಲಿ, ಪಂಡಿತನಾಗಲಿ ರುದ್ರಾಕ್ಷಿ ಧಾರಣೆಯಿಂದ ಸಮಸ್ತಪಾಪಗಳಿಂದ ಬಿಡುಗಡೆ ಹೊಂದುವನು. ಒಂದು ಕೋಟಿ ಗೋವುಗಳನ್ನು ದಾನಮಾಡುವದರಿಂದ ಉಂಟಾಗುವ ಫಲವು ಪ್ರತಿದಿವಸ ರುದ್ರಾಕ್ಷಿ ಧಾರಣೆ ಮಾಡುವದರಿಂದ ಪ್ರಾಪ್ತವಾಗುವದು ಯಾವನು ಮರಣ ಸಮಯದಲ್ಲಿ ಶಿವನನ್ನು ಸ್ಮರಿಸುತ್ತ ರುದ್ರಾಕ್ಷಿಯನ್ನು ನೀರಿನಲ್ಲಿ ತೇಯ್ದು ಆನೀರನ್ನು ಪಾನ ಮಾಡುವನೋ ಅವನು ರುದ್ರಲೋಕವನ್ನು ಸೇರುತ್ತಾನೆ, ಯಾರುಸರ್ವ ಅವಯವಗಳಲ್ಲಿ ಭಸ್ಮವನ್ನುಧರಿಸಿಕೊಂಡು ರುದ್ರಾಕ್ಷಿಮಾಲೆಗಳನ್ನುಧರಿಸಿಕೊಳ್ಳುವರೋಅವರುಪ್ರತ್ಯಕ್ಷ ರುದ್ರರಾಗುವರು ಬ್ರಾಹ್ಮಣನು ಸಹಎಲ್ಲ ವಿಧವಾದ ನಿತ್ಯಕರ್ಮ, ಕಾಮ್ಯಕರ್ಮ, ನೈಮಿತ್ತಿಕ ಕರ್ಮಗಳನ್ನು ತಪ್ಪದೆ ಮಾಡುತ್ತಿದ್ದಾಗ್ಯೂ ಅತನು ಭಸ್ಮ ರುದ್ರಾಕ್ಷಿಗಳನ್ನು ಧರಿಸದಿದ್ದರೆ ಆತನಿಗೆ ಫಲಪ್ರಾಪ್ತಿಯಾಗುವದಿಲ್ಲ. ಆದ್ದರಿಂದ ವಿಭೂತಿ



ರುದ್ರಾಕ್ಷಿಗಳನ್ನು ಧರಿಸತಕ್ಕವನು ಶ್ರೇಷ್ಠನೂ, ಶ್ರುತಿ, ಸ್ಮೃತಿಗಳಿಂದ, ಶ್ಲಾಘನೀಯನೂ ಆಗುತ್ತಾನೆ.

**ಶಿವಲಿಂಗಾಗಮದಲ್ಲಿ**

ರುದ್ರಾಕ್ಷಿ ಮೂಲಂ ಬ್ರಹ್ಮಾಚ ತನ್ನಾಳಂ ವಿಷ್ಣುರುಚ್ಯತೇ ।
ಮುಖಂ ಸದಾಶಿವಾ ಪ್ರೋಕ್ತಂ ಬಿಂದು ಃ ಸರ್ವತ್ರದೇವತಾ ॥

ರುದ್ರಾಕ್ಷಿಯ ಮುಖದಲ್ಲಿ ಶಿವನಾಳ ಮಧ್ಯದಲ್ಲಿ ವಿಷ್ಣು, ಪೃಷ್ಠದಲ್ಲಿ ಬ್ರಹ್ಮ ಆದರ ಬಿಂದುವಿನಲ್ಲಿ ಸಮಸ್ತ ದೇವತೆಗಳು ಮತ್ತು ರುದ್ರಾಕ್ಷಿಯ ಸರ್ವಾಂಗದಲ್ಲಿ ಸರ್ವದೇವರು ರುದ್ರಾಕ್ಷಿಯನ್ನು ತೇಯ್ದು ಇದರ ಗಂಧವನ್ನು ತೆಗೆದುಕೊಂಡರೆ ಕ್ಯಾನ್ಸರ ಹೃದಯದಅಶಕ್ತತೆ ಕ್ಷಯ,ಮೊದಲಾದ ರೋಗಗಳು ಗುಣಮುಖವಾಗುವವು

**ಬೃಹತ್ ಜಾಬಾಲೋಪನಿಷತ್ತಿನಲ್ಲಿ**

ಪುರಾತ್ರಿಪುರಸಂಹಾರೀ ತ್ರಿಣೇತ್ರೋ ಜಗತಾಂಪತಿ ಃ ।
ಉದಪಶ್ಯತ್ಪರಾಂಯೋಗ ಮುನ್ಮೀಲಿತ ವಿಲೋಚನ ಃ ॥
ನಿಪೇತುಸ್ತಸ್ಯ ನೇತ್ರೇಭ್ಯೋ ಬಹವೋಜಲಬಿಂದವ ಃ ।
ತೇಭ್ಯೋ ಜಾತಾಹಿ ರುದ್ರಾಕ್ಷಾ ರುದ್ರಾಕ್ಷಾ ಇತಿಕೀರ್ತಿತಾ ಃ ।
ರುದ್ರನೇತ್ರ ಸಮುತ್ಪನ್ನಾ ರುದ್ರಾಕ್ಷಾ ಲೋಕಪಾವನಾ ಃ ।
ಅಷ್ಟತ್ರಿಂಶತ್ಪ್ರಭೇದೇನ ಭವಂತ್ಯುತ್ಪತ್ತಿ ಭೇದತ ಃ ॥
ನೇತ್ರಾತ್‌ಸೂರ್ಯಾತ್ಮನ ಃಶಂಭೋ ಃಕಪಿಲಾದ್ವಾದಶೋದಿತಾಃ।
ಶ್ವೇತಾ ಃ ಷೋಡಶ ಸಂಜಾತಾ ಃ ಸೋಮರೂಪಾದ್
ವಿಲೋಚನಾತ್ ॥
ಕೃಷ್ಣಾ ದಶವಿಧಾಜಾತಾ ವಹ್ನಿರೂಪಾ ದ್ವಿಲೋಚನಾತ್ ।
ಏವ ಮುತ್ಪತ್ತಿ ಭೇದೇನ ರುದ್ರಾಕ್ಷಾ ಬಹುಧಾಸ್ಮೃತಾ ಃ ॥

ಪ್ರಾಚೀನ ಕಾಲದಲ್ಲಿ ಬ್ರಹ್ಮ, ವಿಷ್ಣು, ಇಂದ್ರ ಮೊದಲಾದ ಸಮಸ್ತ ದೇವರ್ಕಳು ತ್ರಿಪುರ ರಾಕ್ಷಸರ ಉಪದ್ರವಕ್ಕೆ ಭೀತರಾಗಿ ರುದ್ರಲೋಕದ ಮಹಾರುದ್ರಂಗೆ ಶಿವಧೋ ಶಿವಧೋ ಎಂದು ಮೊರೆಯಿಡುತ್ತ ಚಿಂತಾಕ್ರಾಂತರಾಗಿ ನಿಲ್ಲಲು ಆಗ ಮಹಾ ರುದ್ರನು ತ್ರಿಪುರ ವಧಾರ್ಥವಾಗಿ ದಿವ್ಯ ಅನಂತ ತೇಜ, ಅನಂತ ಜ್ವಾಲಾಮಯವಾಗಿ ಹ ಅಘೋರ ರೂಪವ ತಾಳಿ

ಉತ್ತಮ ಅಘೋರ ಅಸ್ತ್ರವ ಚಿಂತಿಸಿ ತ್ರಿಪುರವನ್ನು ಕುರಿತು ದಿವ್ಯ ಸಹಸ್ರ ವರ್ಷಗಳ ವರೆಗೆ ತನ್ನ ಮೂರೂ ನೇತ್ರಗಳನ್ನು ವಿಕಸಿತಗೊಳಿಸಿ ಮೇಲ್ಭಾಗಕ್ಕೆ ನೋಡಲಾಗಿ ಆತನ ಸೂರ್ಯ. ಚಂದ್ರ ಅಗ್ನಿ ಈ ತ್ರಿನೇತ್ರಗಳಿಂದ ರಕ್ತ ಜಲಬಿಂದುಗಳು ಉದುರಿದವು. ಆ ರಕ್ತ ಜಲಬಿಂದುಗಳಿಂದ ರುದ್ರಾಕ್ಷಿಗಳು ಉತ್ಪನ್ನವಾದವು ಮತ್ತು ರುದ್ರಾಕ್ಷಿಗಳೆಂದು ಪ್ರಸಿದ್ಧವಾದವು. ಈ ರುದ್ರಾಕ್ಷಿಗಳು ಉತ್ಪತ್ತಿ ಭೇದದಿಂದ ಮೂವತ್ತೆಂಟು ವಿಧವಾಗಿವೆ. ಪರಮೇಶ್ವರನ ಸೂರ್ಯನೇತ್ರದಿಂದ ಕಪಿಲ ಬಣ್ಣದ ಹನ್ನೆರಡು ಪ್ರಕಾರದ ರುದ್ರಾಕ್ಷಿಗಳೂ, ಚಂದ್ರನೇತ್ರದಿಂದ ಬಿಳಿಯ ಬಣ್ಣದ ಹದಿನಾರು ಪ್ರಕಾರದ ರುದ್ರಾಕ್ಷಿಗಳೂ. ಅಗ್ನಿನೇತ್ರದಿಂದ ಕಪ್ಪು ಬಣ್ಣದ ಹತ್ತು ಪ್ರಕಾರದ ರುದ್ರಾಕ್ಷಿಗಳೂ ಉತ್ಪನ್ನವಾದವು ಈ ರೀತಿಯಾಗಿ ಉತ್ಪತ್ತಿ ಭೇದದಿಂದ ರುದ್ರಾಕ್ಷಿಗಳು ನಾನಾವಿಧವಾಗಿ ಹೇಳಲ್ಪಟ್ಟಿವೆ. ರುದ್ರಾಕ್ಷಿಗಳು ಕಾಂತಿ ಯುಕ್ತವಾದವುಗಳೂ, ಛಿದ್ರವಿಲ್ಲದವುಗಳೂ, ಅನ್ಯರಿಂದ ಧರಿಸಲ್ಪಡದೆ ಇದ್ದವುಗಳೂ ಆಗಿದ್ದರೆ ಅವು ಉತ್ತಮ ರುದ್ರಾಕ್ಷಿಗಳೆಂದು ತಿಳಿಯಬೇಕು. ರುದ್ರಾಕ್ಷಿಗಳನ್ನು ದೇಹದ ಆಯಾಸ್ಥಾನಗಳಿಗೆ ಅನುಗುಣವಾಗಿಯೂ, ಮುಖಗಳಿಗೆ ಅನುಸಾರವಾಗಿಯೂ, ಸಂಬಂಧಾನು ಗುಣವಾಗಿಯೂ, ಶಾಸ್ತ್ರ ವಿಧಿಗನುಸಾರವಾಗಿಯೂ ಧರಿಸಿಕೊಳ್ಳುವುದರಿಂದ ರುದ್ರಸಾಯುಜ್ಯ ಸಿದ್ಧಿ ಯುಂಟಾಗುವದು.

**ಕಾಡ ಸಿದ್ದೇಶ್ವರ ವಚನದಲ್ಲಿ—**

ಆರು ಇಲ್ಲದ ಭೂಮಿಯಲ್ಲಿ
ಬೇರಿಲ್ಲದ ರುದ್ರಾಕ್ಷಿಯ ಮರಹುಟ್ಟಿತ್ತು
ನೀರಿಲ್ಲದೆ ಆ ವೃಕ್ಷಪಲ್ಲವಿಸಿತ್ತು
ಆ ವೃಕ್ಷಕ್ಕೆ ರಕ್ತ ವರ್ಣದ ಒಂದು ಕುಸುಮ ಪುಟ್ಟಿತ್ತು
ಆ ಕುಸುಮದಲ್ಲಿ ಒಂದು ಮುಖದ ಮೂರುಮುಖದ
ಸಹಸ್ರಮುಖದ, ದ್ವಿಮುಖದ
ಷೋಡಶ ಮುಖದ ದ್ವಾದಶ ಮುಖದ ದಶಮುಖದ ಷಣ್ಮುಖದ
ಚತುರ್ವಿಧ ಮುಖದ ಬ್ರಹ್ಮ ಮೊದಲಾಗಿ ರುದ್ರಾಕ್ಷಿಪುಟ್ಟಿದವು ನೋಡಾ



ಇಂತಪ್ಪ ರುದ್ರಾಕ್ಷಿಗಳನು ಗುರುಮುಖದಿಂದ ಪಡೆಕೊಂಡು
ಒಂದು ಮುಖದ ರುದ್ರಾಕ್ಷಿಯನ್ನು ಸ್ವರ್ಗಲೋಕದಲ್ಲಿಟ್ಟು
ಮೂರು ಮುಖದ ರುದ್ರಾಕ್ಷಿಯನ್ನು ಪಾತಾಳದಲ್ಲಿಟ್ಟು
ಸಹಸ್ರ ಮುಖದ ರುದ್ರಾಕ್ಷಿಯನು ಮರ್ತ್ಯಲೋಕದಲ್ಲಿಟ್ಟು
ದ್ವಿ ಮುಖದ ರುದ್ರಾಕ್ಷಿಯನು ಬೈಲಲ್ಲಿಟ್ಟು
ಷೋಡಶ ಮುಖದ ರುದ್ರಾಕ್ಷಿಯನು ಆಕಾಶದಲ್ಲಿಟ್ಟು
ದ್ವಾದಶ ಮುಖದ ರುದ್ರಾಕ್ಷಿಯನು ವಾಯುವಿನಲ್ಲಿಟ್ಟು
ದಶ ಮುಖದ ರುದ್ರಾಕ್ಷಿಯನು ಅಗ್ನಿಯಲ್ಲಿಟ್ಟು
ಷಣ್ಮುಖದ ರುದ್ರಾಕ್ಷಿಯನು ನೀರಲ್ಲಿಟ್ಟು
ಚತುರ್ಮುಖದ ರುದ್ರಾಕ್ಷಿಯನು ಭೂಮಿಯಲ್ಲಿಟ್ಟು
ಇದಲ್ಲದೆ ಕೆಲವು ರುದ್ರಾಕ್ಷಿಗಳನು ಬ್ರಹ್ಮಾಂಡದಲ್ಲಿಟ್ಟು
ಇಂತೀ ಕ್ರಮದಿಂದ ರುದ್ರಾಕ್ಷಿಯನು ಧರಿಸಿ ಕಾಯಕವ
ಮಾಡುತಿರ್ದೆನಯ್ಯಾ ಶಂಕರ ಪ್ರಿಯ ಚನ್ನಕದಂಬಲಿಂಗ
ನಿರ್ಮಾಯ ಪ್ರಭುವೇ ||೧||

ಇಂತಪ್ಪ ರುದ್ರಾಕ್ಷಿಯನು ಧರಿಸಿದ ಚೇರಮರಾಯಂಗೆ ಮೋಕ್ಷವಾಯಿತ್ತು
ಇಂತಪ್ಪ ರುದ್ರಾಕ್ಷಿಯನು ಧರಿಸಿದ ಮಹಾದೇವಿಯಕ್ಕಂಗೆ
ಆರೂಢಪದವಾಯ್ತು
ಇಂತಪ್ಪ ರುದ್ರಾಕ್ಷಿಯನು ಧರಿಸಿ ಸೌಂದರನಂಬೆಣ್ಣಗಳಿಗೆ ನಿಜಲಿಂಗೈ
ಕ್ಯಪದವಾಯಿತ್ತು
ಇಂತಿವರು ಮೊದಲಾಗಿ ಸಕಲಗಣಗಳಿಗೆ ರುದ್ರಾಕ್ಷಿಯಿಂದ
ಶಿವಪದವಾಯಿತ್ತು
ಇಂತಿದರ ನಿರ್ಣಯವ ಗುರು ಮುಖದಿಂ ತಿಳಿದು ಸರ್ವಾಂಗದಲ್ಲಿ
ರುದ್ರಾಕ್ಷಿಯ ಧರಿಸಿ
ಪರಶಿವಲಿಂಗದಲ್ಲಿ ಬೆರೆಯ ಬೇಕಲ್ಲದೆ ಇಂತಪ್ಪ ವಿಚಾರ ತಿಳಿಯದೆ
ರುದ್ರಾಕ್ಷಿ ಧರಿಸಿದೊಡೆ
ಹುಲಿಯಬಣ್ಣಕ್ಕೆ ನರಿಯು ಮೈಸುಟ್ಟುಕೊಂಡು ಸತ್ತಂತಾಯಿತ್ತು ನೋಡಾ
ಶಂಕರ ಲಿಂಗ ಚನ್ನಕದಂಬ ಲಿಂಗ ನಿರ್ಮಾಯ ಪ್ರಭುವೇ ||೨||

ಈ ಪ್ರಕಾರ ಗುರು ಮುಖದಿಂದ ರುದ್ರಾಕ್ಷಿ ಧಾರಣೆಯ ಕ್ರಮ ತಿಳಿದು ಧರಿಸಿಕೊಳ್ಳಬೇಕು.

### ಸಿದ್ಧಾಂತ ಶಿಖಾಮಣಿ

ಶಿಖಾಯಾಮೇಕ ಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ ।
ದ್ವಿತ್ರಿದ್ವಾದಶವಕ್ತ್ರಾಣಿ ಶಿರಸಿ ತ್ರೀಣಿಧಾರಯೇತ್ ॥
ಷಟ್ತ್ರಿಂಶದ್ಧಾರಯೇನ್ಮೂರ್ಧ್ನಿ ನಿತ್ಯ ಮೇಕಾದಶಾನನಾನ್ ।
ದಶ ಸಪ್ತ ಪಂಚ ವಕ್ತ್ರಾನ್ ಷಟ್ ಷಟ್ ಕರ್ಣದ್ವಯೇವಹೇತ್ ॥
ಷಡಷ್ಟವದನಾನ್ ಕಂಠೇ ದ್ವಾತ್ರಿಂಶದ್ಧಾರಯೇತ್ ಸದಾ ।
ಪಂಚಾಶದ್ಧಾರಯೇತ್ ಧೀಮಾನ್ ಚತುರ್ವಕ್ತ್ರಾಣಿ ವಕ್ಷಸಿ ॥
ತ್ರಯೋದಶಮುಖಾನ್ ಬಾಹ್ವೋರ್ಧರೇತ್ ಷೋಡಶ ಷೋಡಶ ।
ಪ್ರತ್ಯೇಕಂ ದ್ವಾದಶ ವಹೇನ್ಮಣಿಬಂಧಯೋಃ ॥
ಚತುರ್ದಶಮುಖಂ ಯಜ್ಞ ಸೂತ್ರಮಷ್ಟೋತ್ತರಂ ಶತಂ ।
ಧಾರಯೇತ್ ಸರ್ವಕಾಲಂತು ರುದ್ರಾಕ್ಷಂ ಪೂಜಕಃ ॥

| ಸ್ಥಾನಗಳು | ರುದ್ರಾಕ್ಷಿಗಳ ಮುಖಗಳು |
|---|---|
| ಶಿಖಾ | ಒಂದು ಮುಖ (ಒಂದು) |
| ಶಿರಸ್ಸು | ಎರಡು, ಮೂರು, ಹನ್ನೆರಡು ಮುಖಗಳು (ಮೂರು) |
| ಮಸ್ತಕ | ಹನ್ನೊಂದು ಮುಖಗಳು (ಮೂವತ್ತಾರು) |
| ಬಲಕಿವಿ | ಹತ್ತು, ಏಳು, ಐದು ಮುಖಗಳು (ಆರು)<br>(೨) (೨) (೨) |
| ಎಡಕಿವಿ | ಹತ್ತು, ಏಳು, ಐದು ಮುಖಗಳು (ಆರು)<br>(೨) (೨) (೨) |
| ಕಂಠ | ಆರು, ಎಂಟು, ಮುಖಗಳು (ಮೂವತ್ತೆರಡು)<br>(೧೬) (೧೬) |
| ಎದೆ | ನಾಲ್ಕು ಮುಖಗಳು (ಐವತ್ತು) |



| | |
|---|---|
| ಬಲತೋಳು | ಹದಿಮೂರು ಮುಖಗಳು (ಹದಿನಾರು) |
| ಎಡತೋಳು | ಹದಿಮೂರು ಮುಖಗಳು (ಹದಿನಾರು) |
| ಬಲಮುಂಗೈ | ಒಂಭತ್ತು ಮುಖಗಳು (ಹನ್ನೆರಡು) |
| ಎಡಮುಂಗೈ | ಒಂಭತ್ತು ಮುಖಗಳು (ಹನ್ನೆರಡು) |
| ಯಜ್ಞೋಪವೀತ | ಹದಿನಾಲ್ಕು ಮುಖಗಳು (ಒಂದನೂರಾ ಎಂಟು) |

ಧರಿಸಿಕೊಳ್ಳುವಂತೆ ಧರಿಸಿಕೊಳ್ಳಬೇಕು.

ಈ ರೀತಿಯಾಗಿ ಪ್ರತಿದಿವಸ ರುದ್ರಾಕ್ಷಿಗಳನ್ನು ಧರಿಸಿಕೊಂಡು ಪೂಜಿಸ್ವುವದರಿಂದ "ಪದೇ ಪದೇಶ್ವಮೇಧಸ್ಯ ಫಲಂ ಪ್ರಾಪ್ನೋತಿನ ಸಂಶಯಃ"ಎಂಬಂತೆ ಒಂದುಅಶ್ವಮೇಧ ಯಜ್ಞವನ್ನು ಮಾಡಿದರೆ ಸಿಗುವಷ್ಟು ಫಲವನ್ನು ಸಂಶಯ್ವಿಲ್ಲದೆ ಪಡೆಯುವನು.

### ಶಿವ ರಹಸ್ಯದಲ್ಲಿ –

ಸ್ನಾನೇ ದಾನೇ ಜಪೇ ಹೋಮೇ ವೈಶ್ವ ದೇವೇ ಸುರಾರ್ಚನೇ ।
ರುದ್ರಾಕ್ಷರಹಿತೋ ವಿಪ್ರೋ ನರಕೇ ಪತತಿ ಧ್ರುವಮ್ ॥

ಸ್ನಾನ ಮಾಡುವಾಗ, ದಾನಕೊಡುವಾಗ, ಜಪಮಾಡುವಾಗ, ಹೋಮ ಕಾರ್ಯದಲ್ಲಿ, ದೇವತೆಗಳನ್ನು ಪೂಜಿಸುವಾಗ ರುದ್ರಾಕ್ಷಿಗಳನ್ನು ಧರಿಸದೆ ಈ ಕಾರ್ಯಗಳನ್ನು ಮಾಡುವ ಬ್ರಾಹ್ಮಣನು ನಿಶ್ಚಯವಾಗಿ ಮುಂದೆ ನರಕವನು ಹೊಂದುವನು.

### ರುದ್ರಾಕ್ಷಿ ಧರಿಸುವ ಕ್ರಮ

ರುದ್ರಾಕ್ಷಿಗಳನ್ನು ತೆಗೆದುಕೊಂಡು ಉಚಿತ ಆಸನದ ಮೇಲೆ ಇಟ್ಟು "ಮಮ ಸಮಸ್ತಪಾಪ ಕ್ಷಯಾರ್ಥಂ ಶಿವಜ್ಞಾನ ಸಂಪತ್ ಸಿದ್ಧ್ಯರ್ಥಂ ರುದ್ರಾಕ್ಷಿ ಧಾರಣಂ ಕರೋಮಿ" ಎಂದು ಸಂಕಲ್ಪವನ್ನು ಮಾಡಿ ಆಯಾಮುಖಗಳ ರುದ್ರಾಕ್ಷಿಗಳಿಗೆ ಆಯಾ ಮಂತ್ರಗಳನ್ನುಉಚ್ಚರಿಸಿ ಆಯಾ ಅಧಿದೇವತೆಗಳನ್ನು ಸ್ಮರಿಸಿ ಆಯಾಸ್ಥಾನಗಳಲ್ಲಿ ಧರಿಸುವ ಸಂಖ್ಯಾನುಗುಣವಾಗಿ ಆಯಾ ಮುಖಗಳ ರುದ್ರಾಕ್ಷಿಗಳನ್ನು ಧರಿಸಬೇಕು.

| ಸ್ಥಾನಗಳು | ರುದ್ರಾಕ್ಷಿ ಸಂಖ್ಯೆ | ಮಂತ್ರ |
|---|---|---|
| ಶಿಖಾ (ಸ್ಥಾನ) ದಲ್ಲಿ | ಒಂದು | ಓಂ ಸದಾಶಿವಾಯನಮಃ |
| ಶಿರಸ್ಸಿನಲ್ಲಿ | ಮೂರು | ಓಂ ವಹ್ನಿಸೂರ್ಯ ಸೋಮಾಧಿಪಾಯ ಶಿವಾಯ ನಮಃ |
| ಮಸ್ತಕದಲ್ಲಿ | ಮೂವತ್ತಾರು | ಓಂ ಷಟ್‌ತ್ರಿಂಶತತ್ತ್ವಾತ ಕಾಯ ಪರಶಿವಾಯನಮಃ |
| ಬಲಕಿವಿಯಲ್ಲಿ | ಆರು | |
| ಎಡಕಿವಿಯಲ್ಲಿ | ಆರು | |
| ಕಂಠದಲ್ಲಿ | ಮೂವತ್ತೆರಡು | ಓಂ ತ್ರಿಯಂಬಕ ಕಲಾತ್ಮನೇ ಶ್ರೀಕಂಠಾಯನಮಃ |
| ಎದೆಯಲ್ಲಿ | ಐವತ್ತು | |
| ಬಲತೋಳಿನಲ್ಲಿ | ಹದಿನಾರು | |
| ಎಡತೋಳಿನಲ್ಲಿ | ಹದಿನಾರು | |
| ಬಲಮುಂಗೈಯಲ್ಲಿ | ಹನ್ನೆರಡು | |
| ಎಡಮುಂಗೈಯಲ್ಲಿ | ಹನ್ನೆರಡು | |
| ಯಜ್ಞೋಪವೀತ | ಒಂದುನೂರಾವಂದು | |

ರುದ್ರಾಕ್ಷಿ ಮುಖಗಳು, ಅಧಿದೇವತೆ ಹಾಗೂ ಬೀಜಾಕ್ಷರ ಮಂತ್ರ

## ಒಂದು (ಏಕಮುಖ) ಮುಖದ ರುದ್ರಾಕ್ಷ

ಏಕವಕ್ತ್ರಂತು ರುದ್ರಾಕ್ಷಂ ಪರತತ್ತ್ವ ಸ್ವರೂಪ ಕಮ್ |
ತದ್ಧಾರಣಾತ್ ಪರೇ ತತ್ತ್ವೇ ಲೀಯತೇ ವಿಜಿತೇಂದ್ರಿಯಃ ||
ಎಂಬ ಚಂದ್ರಜ್ಞಾನಾಗಮದ ಸೂತ್ರಾನುಸಾರವಾಗಿ

ಒಂದು ಮುಖದ ರುದ್ರಾಕ್ಷವು ಸಾಕ್ಷಾತ್ ಶಿವಸ್ವರೂಪವು ಸ್ವಯಂ ಶಕ್ತಿಯುಳ್ಳದ್ದು, ಪರತತ್ವ ಪ್ರಕಾಶ ಸ್ವರೂಪವು, ಭಕ್ತಿ ಮುಕ್ತಿಪ್ರದವಾದದ್ದು ಸರ್ವರ ಅಪೇಕ್ಷೆಗಳನ್ನು ಪೂರ್ಣಮಾಡುವಂಥದು. ಕಾಮಧೇನು, ಕಲ್ಪವೃಕ್ಷ,



ಚಿಂತಾಮಣಿಗಳು ಇದ್ದಂತೆ. ಇದರಿಂದ ಸರ್ವಕಾರ್ಯಗಳು ಸಿದ್ಧಿಯಾಗುವವು. ಸ್ವಯಂ ಸಿದ್ಧಸ್ವರೂಪವುಳ್ಳದ್ದು. ಈ ರುದ್ರಾಕ್ಷಿ ಧರಿಸಿದವನು. ರಾಜಕೀಯ, ಸಾಮಾಜಿಕ ಧಾರ್ಮಿಕ ಕಾರ್ಯಗಳಲ್ಲಿ ಸಂಪೂರ್ಣ ಜಯಶಾಲಿಯಾಗುವನು. ರಾಜಕಾರಣಿಗಳು, ನೌಕರ ವರ್ಗದವರು ಧರಿಸಿದರೆ ಉತ್ತರೋತ್ತರ ಪದೋನ್ನತಿ ಹೊಂದುವರು. ವಿರೋಧಿಗಳು ಸ್ತಬ್ಧರಾಗುವರು. ಜನವಶೀಕರಣವಾಗುವದು. ಈ ರುದ್ರಾಕ್ಷಿಯ ದರ್ಶನ, ಸ್ಪರ್ಶನ, ಧಾರಣ ಗಳಿಂದ ಬ್ರಹ್ಮಹತ್ಯಾದಿ ಮಹಾಪಾತಕಗಳುನಾಶವಾಗುವವು. ಏಕಮುಖದ ರುದ್ರಾಕ್ಷಿ ವೃಕ್ಷವು ಹನ್ನೆರಡು ವರ್ಷಗಳಿಗೆ ಒಮ್ಮೆ ಫಲಬಿಡುವದು. ಈ ವೃಕ್ಷಗಳು ನೇಪಾಳ ರಾಜ್ಯದಲ್ಲಿದ್ದು ಈ ವೃಕ್ಷಗಳ ಒಡೆತನವು ಸಂಪೂರ್ಣ ನೇಪಾಳ ಸರಕಾರದ ಅಧೀನದಲ್ಲಿದೆ ಆದ್ದರಿಂದ ಈ ರುದ್ರಾಕ್ಷಿಯು ಸಿಗುವದು ಬಹಳ ದುರ್ಲಭ. ಅದರಂತೆ ಬೆಲೆಯೂ ಅತ್ಯಧಿಕ ಈ ರುದ್ರಾಕ್ಷಿ ದೊರೆತವನು ಭಾಗ್ಯಶಾಲಿಯು. ಇದು ಸಕಲ ಸಂಪತ್ ಸಮೃದ್ಧಿಯನ್ನುಂಟುಮಾಡುವದು ಒಂದು ಮುಖದ ರುದ್ರಾಕ್ಷಿ ಬಲಮುರಿ ಶಂಖ, ಬೆತ್ತ ಇವು ದೊರೆಯುವದು ಅದೃಷ್ಟವಶಾತ್ ಎಂದು ಬಲ್ಲವರು ಹೇಳುತ್ತಾರೆ.

## ಬೀಜಾಕ್ಷರ ಮಂತ್ರ

ಓಂ ಏಂ ಹೆಂ ಜಂ ಐಂ ಓಂ ನಮಃ |

ಈ ಮಂತ್ರವನ್ನು ೧ ಸಾರೆ, ಹನ್ನೊಂದುಸಾರೆ ಅಥವಾ ಒಂದನೂರಾ ಎಂಟು ಸಾರೆ ಜಪಿಸಿ ಧರಿಸಿಬೇಕು.

## ದ್ವಿಮುಖದ ರುದ್ರಾಕ್ಷಿ

ದ್ವಿವಕ್ತ್ರಂ ಚೈವ ರುದ್ರಾಕ್ಷಂ ಅರ್ಧನಾರೀಶ್ವರಾತ್ಮಕಂ |
ಧಾರಣಾತ್ ಅರ್ಧನಾರೀಶಃ ಪ್ರಿಯತೇ ತಸ್ಯನಿತ್ಯಶಃ |

ಎಂಬ ಚಂದ್ರಜ್ಞಾನಾಗಮದ ಪ್ರಮಾಣದಂತೆ ಎರಡು ಮುಖದ ರುದ್ರಾಕ್ಷಿಯು ಅರ್ಧನಾರೀಶ್ವರ ಸ್ವರೂಪವು ಈ ರುದ್ರಾಕ್ಷಿಯನ್ನು ಧರಿಸುವದರಿಂದ ಅರ್ಧನಾರೀಶ್ವರನು ಸಂತುಷ್ಟನಾಗುವನು. ಅಪಮೃತ್ಯುವನ್ನು ಪರಿಹರಿಸುವನು. ದೀರ್ಘಾಯುಷಿಯನ್ನಾಗಿ ಮಾಡುವನು. ಈ ರುದ್ರಾಕ್ಷಿ

ಯನ್ನು ಪ್ರತಿದಿವಸ ಪೂಜಿಸುವದರಿಂದ ಸೌಭಾಗ್ಯವು ಸಂಪದಭಿವೃದ್ಧಿಯು ಹಾಗೂ ಸಮಸ್ತ ಮನೋಭಿಲಾಷೆಗಳು ಫಲಪ್ರದವಾಗುವವು ಸ್ತ್ರೀಹತ್ಯಾ ಗೋಹತ್ಯಾದಿ ದೋಷಗಳು ನಿವಾರಣೆಯಾಗುವವು. ಸಂತಾನವಿಲ್ಲದವರಿಗೆ ಸಂತಾನಫಲವನ್ನೂ ಸಹ ಕೊಡುವಂಥದಾಗಿದೆ. ಈ ರುದ್ರಾಕ್ಷಿಯ ಅಧಿದೇವತೆ ಅರ್ಧನಾರೀಶ್ವರ ಸ್ವಾಮಿಯು.

**ಬೀಜಾಕ್ಷರ ಮಂತ್ರ**

ಓಂ ಶ್ರೀ ಹ್ರೀಂ ಶಾಂ ವ್ರೀಂ ಓಂ ನಮಃ ।

ಈ ಮಂತ್ರವನ್ನು ಒಂದು ಸಾರಿ ಹನ್ನೊಂದುಸಾರಿ ಅಥವಾ ಒಂದು ನೂರಾಎಂಟು ಸಾರಿ ಜಪಿಸಿ ಧರಿಸಿಕೊಳ್ಳಬಹುದು.

**ಮೂರು (ತ್ರಿಮುಖ) ಮುಖದ ರುದ್ರಾಕ್ಷಿ**

ತ್ರಿವಕ್ತ್ರಂ ಅನಲಃ ಸಾಕ್ಷಾತ್ ಸ್ತ್ರೀಹತ್ಯಾಂ ದಹತಿ ಕ್ಷಣಾತ್ ।
ತ್ರಿಮುಖಂ ಚೈವ ರುದ್ರಾಕ್ಷಂ ಅಗ್ನಿತ್ರಯ ಮುಹೃತಮ್ ॥
ತದ್ಧಾರಣೇನ ಹಂತ ಬುಕ್ ತುಷ್ಯತಿ ಸ್ಫಟಿಕಾಮದಃ ॥

ಎಂಬ ಚಂದ್ರಜ್ಞಾನಾಗಮದ ಸೂಚನಾನುಸಾರವಾಗಿ ಈ ರುದ್ರಾಕ್ಷಿಯ ಅಧಿದೇವತೆಯು ಅಗ್ನಿಯು. ಈ ರುದ್ರಾಕ್ಷಿಯು ಸಾಕ್ಷಾತ್ ಅಗ್ನಿ ಸ್ವರೂಪವು ಈ ರುದ್ರಾಕ್ಷಿಯನ್ನು ಧಾರಣೆ ಮಾಡುವದರಿಂದ ಮನುಷ್ಯರು ಈ ತೊಂದರೆಗಳಿಂದ ದೂರಾಗುವರು. ಸ್ತ್ರೀ ಹತ್ಯಾದಿ ದೋಷವು ನಿವಾರಣೆಯಾಗುವದು. ಮನೆಯಲ್ಲಿದ್ದರೆ ಗೃಹ ಶಾಂತಿಯನ್ನುಂಟು ಮಾಡುವದು. ವ್ಯಾಪಾರಸ್ಥರು ತಮ್ಮ ಅಂಗಡಿಯಲ್ಲಿಟ್ಟರೆ ವ್ಯಾಪಾರದ ಅಭಿವೃದ್ಧಿಗೆ ಒಳ್ಳೆಯದು. ವಿರೋಧಿಗಳಿಂದ ಬರುವ ತೊಂದರೆಗಳನ್ನು ನಿವಾರಣೆ ಮಾಡುವದು. ಮಾಟ, ಮದು ವಗೈರೆ ವಾಮಾಚಾರದ ಕೃತಿಗಳಿಂದ ಒದಗಬಹುದಾದ ಉಪದ್ರವಗಳನ್ನು ಸಹ ಪರಿಹಾರ ಮಾಡುವದು.

**ಬೀಜಾಕ್ಷರ ಮಂತ್ರ**

ಓಂ ರಂ ಇಂ ಹ್ರೀಂ ಹಂ ಓಂ ನಮಃ



ಈ ಮಂತ್ರವನ್ನು ಒಂದುಸಾರಿ, ಹನ್ನೊಂದು ಸಾರಿ ಅಥವಾ ಒಂದು ನೂರಾಎಂಟು ಸಾರಿ ಜಪಮಾಡಿ ಧರಿಸಿಕೊಳ್ಳಬೇಕು.

**ನಾಲ್ಕು (ಚತುರ್ಮುಖ) ರುದ್ರಾಕ್ಷ**

ಚತುರ್ಮುಖಂತು ರುದ್ರಾಕ್ಷಂ ಬ್ರಹ್ಮರೂಪ ಮುದಾಹೃತಂ ।
ಪಂಚವಕ್ತ್ರಂತುರುದ್ರಾಕ್ಷಂ ಪಂಚಬ್ರಹ್ಮ ಸ್ವರೂಪಕಂ ॥

ಎಂಬ ಚಂದ್ರಜ್ಞಾನಾಗಮದ ಸೂತ್ರಾನುಸಾರವಾಗಿ ನಾಲ್ಕು ಮುಖದ ರುದ್ರಾಕ್ಷಿಯು ಸಾಕ್ಷಾತ್ ಬ್ರಹ್ಮ ಸ್ವರೂಪವು ಇದರ ಅಧಿದೇವತೆಯು ಬ್ರಹ್ಮನು ಈ ರುದ್ರಾಕ್ಷಿಯನ್ನು ಧರಿಸುವದರಿಂದ ಆರೋಗ್ಯ ವೃದ್ಧಿಯು, ಮಂದಬುದ್ಧಿಯುಳ್ಳವರು, ಹುಚ್ಚು ಹಿಡಿದವರು, ಹಟಮಾರಿ ಮಕ್ಕಳು, ಹೆಚ್ಚು ಅಳುವ ಮಕ್ಕಳು, ಜ್ಞಾಪಕಶಕ್ತಿ ಇಲ್ಲದವರು ಈ ರುದ್ರಾಕ್ಷಿಯನ್ನು ಧಾರಣೆ ಮಾಡುವದರಿಂದ ಅವರುಬುದ್ಧಿವಂತರೂಮತ್ತು ಕುಶಾಗ್ರಮತಿಗಳೂಆಗುತ್ತಾರೆ. ಈರುದ್ರಾಕ್ಷಿಗಳನ್ನು ವಿದ್ಯಾರ್ಥಿಗಳು ಅವಶ್ಯವಾಗಿ ಧರಿಸಿಕೊಳ್ಳಬೇಕು. ಈ ರುದ್ರಾಕ್ಷಿ ಧಾರಣೆಮಾಡುವದರಿಂದ ಆದಿ ದೈವಿಕ ತಾಪವಾದ ತೊಂದರೆಗಳು ನಿವಾರಣೆಯಾಗುವವು ಮತ್ತು ಪ್ರಾಣಿಹತ್ಯ ದೋಷವು ನಿವಾರಣೆಯು (ಶ್ರೀ)ಸಂಪದಭಿವೃದ್ಧಿಯು ಮತ್ತು ಸರ್ವಮನೋರಥಗಳನ್ನು ಪೂರ್ಣಗೊಳಿಸುವದು ಅಗ್ನಿಪುರಾಣದಲ್ಲಿ ಇದರ ಮಹತ್ವವು ವರ್ಣಿಸಲ್ಪಟ್ಟಿದೆ.

**ಬೀಜಾಕ್ಷರ ಮಂತ್ರ**

ಓಂ ವಾಂ ಕ್ರಾಂ ತಾಂ ಹಾಂ ಈಂ ನಮಃ

ಈ ಮಂತ್ರವನ್ನು ಒಂದು ಸಾರಿ, ಹನ್ನೊಂದುಸಾರಿ ಅಥವಾ ಒಂದ ನೂರಾಎಂಟು ಸಾರಿ ಜಪಿಸಿ ಧರಿಸಿಕೊಳ್ಳಬೇಕು.

**ಐದು (ಪಂಚಮುಖ) ಮುಖದ ರುದ್ರಾಕ್ಷಿ**

ಪಂಚವಕ್ತ್ರಂ ಸ್ವಯಂ ಬ್ರಹ್ಮ ಬ್ರಹ್ಮಹತ್ಯಾಂ ವ್ಯಪೋಹತಿ ।
ತಸ್ಯಧಾರಣ ಮಾತ್ರೇಣ ಸಂತುಷ್ಯತಿ ಸದಾಶಿವಃ ॥

ಎಂಬ ಚಂದ್ರಜ್ಞಾನಾಗಮದ ಉಕ್ತಿಯಂತೆ ಈ ರುದ್ರಾಕ್ಷಿಯು ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಈ ಪಂಚಬ್ರಹ್ಮ ಸ್ವರೂಪವಾಗಿದೆ. ಸಾಕ್ಷಾತ್ ಕಾಲಾಗ್ನಿ ರುದ್ರನು ಈ ರುದ್ರಾಕ್ಷಿಯ ಅಧಿದೇವತೆಯು. ಈ ರುದ್ರಾಕ್ಷಿಯನ್ನು ಧರಿಸುವದರಿಂದ ಸಾಕ್ಷಾತ್ ಶಂಕರನು ಸಂತುಷ್ಟನಾಗುತ್ತಾನೆ ಈ ರುದ್ರಾಕ್ಷಿಯು ಭಕ್ತಿ ಮುಕ್ತಿ ಪ್ರದಾಯಕವಾಗಿದ್ದು ಮನಸ್ಸಿನ ಸ್ಥಿರತೆಯನ್ನು ಕಾಯ್ದುಕೊಳ್ಳುತ್ತದೆ. ಇದು ಉಪಾಸಕರಿಗೆ ಶೀಘ್ರ ಫಲಕೊಡುವಂಥದಾಗಿದ್ದು ಶಾಂತಚಿತ್ತರನ್ನಾಗಿ ಮಾಡುತ್ತದೆ. ಜಪಮಾಲೆಗೆ ಈ ರುದ್ರಾಕ್ಷಿಗಳು ಯೋಗ್ಯವಾದವುಗಳು. ಇದನ್ನು ಧರಿಸುವದರಿಂದ ದುಃಖವು ದೂರಾಗಿ ಸುಖವುಂಟಾಗುವದು ಮತ್ತು ಪರಸ್ತ್ರೀ ಭೋಗಾದಿದೋಷವೂ ನಿವಾರಣೆಯಾಗುವದು. ಹಾಗೂ ಸಕಲ ರೀತಿಯಿಂದ ಭಾಗ್ಯವಂತನು ಆಗುವನು.

### ಬೀಜಾಕ್ಷರ ಮಂತ್ರ

ಓಂ ಹಾಂ ಷ್ಯಾಂ ಸ್ವಾಹಾ ॥

ಈ ಮಂತ್ರವನ್ನು ಒಂದುಸಾರೆ, ಹನ್ನೊಂದು ಸಾರೆ, ಅಥವಾ ಒಂದು ನೂರಾ ಎಂಟು ಸಾರೆ ಜಪಿಸಿ ಧರಿಸಿಕೊಳ್ಳಬೇಕು.

### ಆರು (ಷಣ್ಮುಖ) ಮುಖದ ರುದ್ರಾಕ್ಷಿ

ಷಡ್ವಕ್ತ್ರಂತು ರುದ್ರಾಕ್ಷಂ ಕಾರ್ತಿಕೇಯಾಧಿ ದೈವತಂ ।
ವಿನಾಯಕಾಧಿ ದೈವಂಚ ದತ್ತೇ ಅವಿಘ್ನಂ ಶ್ರೀಯಂಪರಾ ॥

ಎಂಬ ಚಂದ್ರಜ್ಞಾನಾಗಮದ ಸೂತ್ರಾನುಸಾರವಾಗಿ ಆರು ಮುಖದ ಈ ರುದ್ರಾಕ್ಷಿಗೆ (ಸ್ಕಂದ) ಸಾಕ್ಷಾತ್ ಷಣ್ಮುಖನು ಅಧಿದೇವತೆಯು. ಈ ರುದ್ರಾಕ್ಷಿಯನ್ನು ಧರಿಸುವದರಿಂದ ವಿದ್ಯಾಭಿವೃದ್ಧಿ, ಐಶ್ವರ್ಯಾಭಿವೃದ್ಧಿ, ಧನ-ಧಾನ್ಯ, ವಸ್ತ್ರ, ವಾಹನಾದಿಗಳು ಅಭಿವೃದ್ಧಿ ಹೊಂದುವವು. ಸುಖ, ಸಂಪತ್ತು ಪ್ರಾಪ್ತವಾಗುವವು. ಗರ್ಭಹತ್ಯಾ ಭ್ರೂಣ (ಶಿಶು) ಹತ್ಯಾ ಬ್ರಹ್ಮಹತ್ಯಾದಿ ದೋಷಗಳು ನಿವಾರಣೆಯಾಗುವವು. (ಕೆಲವರ ಅಭಿಪ್ರಾಯದಂತೆ) ಗಣಪತಿಯು ಈ ರುದ್ರಾಕ್ಷಿಯ ಅಧಿದೇವತೆಯು.)



### ಬೀಜಾಕ್ಷರ ಮಂತ್ರ

ಓಂ ಹ್ರೀಂ ಶ್ರೀಂ ಕ್ಷೀಂ ಸೌಂ ಐಂ ನಮಃ ॥

ಈ ಮಂತ್ರವನ್ನು ಒಂದುಸಾರೆ, ಹನ್ನೊಂದುಸಾರೆ, ಅಥವಾ ಒಂದು ನೂರಾಎಂಟುಸಾರೆ ಜಪಿಸಿ ಧಾರಣೆ ಮಾಡಿಕೊಳ್ಳಬೇಕು.

### ಏಳು (ಸಪ್ತ) ಮುಖದ ರುದ್ರಾಕ್ಷಿ

ಸಪ್ತವಕ್ತ್ರಂತು ರುದ್ರಾಕ್ಷಂ ಸಪ್ತ ಮಾತೃ ಅಧಿದೈವತಂ ।
ತತ್‌ಧಾರಣೇನ ಸುಪ್ರೀತಾ ಜಯಂ ದಧತಿ ಮಾತರಂ

ಎಂಬ ಚಂದ್ರಜ್ಞಾನಾಗಮ ವ್ಯಾಖ್ಯಾನುಸಾರವಾಗಿ ಏಳು ಮುಖದ ಈ ರುದ್ರಾಕ್ಷಿಗೆ ಸಾಕ್ಷಾತ್ ಸಪ್ತ ಮಾತೃಕೆಯರು ಅಧಿದೇವತೆಗಳು. ಈ ರುದ್ರಾಕ್ಷಿಯು ಸಾಕ್ಷಾತ್ ಅನಂತ ಸ್ವರೂಪವು. ಈ ರುದ್ರಾಕ್ಷಿಯನ್ನು ಧರಿಸುವದರಿಂದ ಸರ್ವಕಾರ್ಯಗಳಲ್ಲಿ ಯಶಸ್ಸು, ಕೀರ್ತಿ, ಬಹುಜನರಿಂದ ಪ್ರತಿಷ್ಠೆ ಗೌರವಾದಿಗಳು ಪ್ರಾಪ್ತವಾಗುವವು. ಅತ್ಯಂತ ದುರ್ಬಲರಾದವರೂ ಸಹ ರಾಜಮನ್ನಣೆಯನ್ನು ಪಡೆಯುವರು ಭಕ್ತಿ ಸಂಪನ್ನನಾಗಿ ಈ ರುದ್ರಾಕ್ಷಿಯನ್ನು ಧರಿಸಿದರೆ ಆರೋಗ್ಯವು, ಧನ-ಧಾನ್ಯ ಸಮೃದ್ಧಿಯು. ಕೋರ್ಟ್, ಕಚೇರಿ ಕೆಲಸಗಳಲ್ಲಿ ವಿಜಯವು. ವ್ಯಾಪಾರಸ್ಥರಿಗೆ, ಕೈಗಾರಿಕಾ ಉದ್ಯೋಗಿಗಳಿಗೆ ಶ್ರೇಷ್ಠತಮವಾದುದು. ಇದನ್ನು ಧರಿಸುವದರಿಂದ ಹೃದ್ರೋಗ ನಿವಾರಣೆಯಾಗುವದಲ್ಲದೆ ಭೂತ, ಪ್ರೇತ, ಪಿಶಾಚಿಗಳ ಬಾಧೆಯು ದೂರಾಗುವವು. ಮಾಟ, ಮಂತ್ರ ಮೊದಲಾದ ತಾಂತ್ರಿಕ ವಾಮಾಚಾರಗಳ ಪೀಡೆಗಳೂ ಪರಿಹಾರವಾಗುವವು.

### ಬೀಜಾಕ್ಷರ ಮಂತ್ರ

ಓಂ ಹುಂ ಶ್ರೀಂ ಹಂ ಸೌಂ ನಮಃ ॥

ಈ ಮಂತ್ರವನ್ನು ಒಂದುಸಾರೆ, ಹನ್ನೊಂದುಸಾರೆ, ಒಂದುನೂರಾಎಂಟುಸಾರೆ ಜಪಿಸಿ ಧಾರಣೆ ಮಾಡಿಕೊಳ್ಳುವದು ಉತ್ತಮ.

## ಎಂಟು (ಅಷ್ಟಮುಖ) ಮುಖದ ರುದ್ರಾಕ್ಷಿ

ಅಷ್ಟವಕ್ತ್ರಂತು ರುದ್ರಾಕ್ಷಂದಿಗಧೀಶಾಧಿ ದೈವತಂ ।
ವಸ್ವಷ್ಟಕ ಪ್ರಿಯಂ ಚೈವ ಗಂಗಾಪ್ರೀತಿಕರಂ ಶುಭಂ ॥
ತದ್ಧಾರಣಾದಿಮೇ ಪ್ರೀತಾದಧತೇ ತಸ್ಯವಾಂಛಿತಂ ॥

ಎಂಬ ಚಂದ್ರಜ್ಞಾನಾಗಮದ ವಚನದಂತೆ ಎಂಟು ಮುಖದ ರುದ್ರಾಕ್ಷಿಗೆ ದಿಕ್ಕುಗಳ ದೇವತೆಗಳು ಅಧಿದೇವತೆಗಳು ಈ ರುದ್ರಾಕ್ಷಿಯನ್ನು ಧರಿಸುವದರಿಂದ ಧ್ರುವ, ಅಧ್ವರ, ಸೋಮ, ಅಬ್, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ ಈ ಅಷ್ಟವಸು (ಎಂಟುಜನವಸುದೇವತೆ) ಗಳು ಸಂತುಷ್ಟರಾಗುವರು ಮತ್ತು ಗಂಗಾದೇವಿಯು ಸಂತೋಷ ಹೊಂದುವಳು. ಈ ರುದ್ರಾಕ್ಷಿಯು ಅಷ್ಟಲಕ್ಷ್ಮೀ ಸ್ವರೂಪವಾಗಿದ್ದು ಅಷ್ಟೈಶ್ವರ್ಯವನ್ನು ಅನುಗ್ರಹಿಸುವದು ಇದನ್ನು ಧರಿಸುವದರಿಂದ ಹೃದ್ರೋಗ, ಕುಷ್ಠ, ಕ್ಷಯ ವಗ್ಯೆರೆ ರೋಗಗಳ ನಿವಾರಣೆಯಾಗುವದಲ್ಲದೆ ಶತ್ರುಗಳ ಬಾಧೆಯೂ, ಪರಿಹಾರವಾಗುವದು, ಪರಸ್ತ್ರೀ ಸಂಬಂಧ ದೋಷಗಳೂ ದೂರಾಗುವವು. ಸರ್ವ ವಿಘ್ನಗಳು ದೂರಾಗಿ ಸುಖ ಪ್ರಾಪ್ತಿಯಾಗುವದು. ಈ ರುದ್ರಾಕ್ಷಿಯ ಅಧಿದೇವತೆ ಗಣಪತಿ ಎಂದೂ ಕೆಲವರ ಅಭಿಮತ.

### ಬೀಜಾಕ್ಷರ ಮಂತ್ರ

ಓಂ ಹ್ರೀಂ ಶ್ರೀಂ ಲಂ ಅಂ ಶ್ರೀಂ ನಮಃ ।

ಈ ಮಂತ್ರವನ್ನು ಒಂದುಸಾರೆ, ಹನ್ನೊಂದುಸಾರೆ ಅಥವಾ ಒಂದೆ ನೂರಾ ಎಂಟುಸಾರೆ ಜಪಿಸಿ ಧಾರಣೆ ಮಾಡಿಕೊಳ್ಳಬೇಕು.

## ಒಂಭತ್ತು (ನವಮುಖ) ಮುಖದ ರುದ್ರಾಕ್ಷಿ

ನವವಕ್ತ್ರಂತು ರುದ್ರಾಕ್ಷಂ ನವಶಕ್ತ್ಯಧಿ ದೈವತಂ ।
ತಸ್ಯಧಾರಣ ಮಾತ್ರೇಣ ಪ್ರಿಯಂತೇ ನವಶಕ್ತಯಃ ॥

ಎಂಬ ಚಂದ್ರ ಜ್ಞಾನಾಗಮದ ವಚನದಂತೆ ಒಂಭತ್ತು ಮುಖದ ರುದ್ರಾಕ್ಷಿಯು ಸಾಕ್ಷಾತ್ ನವದುರ್ಗಾ ಸ್ವರೂಪವು. ಒಂಭತ್ತು ಜನಶಕ್ತಿ ದೇವತೆಯರು ಇದರ ಅಧಿದೇವತೆಗಳು. ಈ ರುದ್ರಾಕ್ಷಿಯನ್ನು ಧರಿಸುವದ



ರಿಂದ ಪ್ರಭಾ, ಮಾಯಾ, ಜಯಾ, ಸೂಕ್ಷ್ಮಾ, ವಿಶುದ್ಧಾ, ನಂದಿನಿ, ಸುಪ್ರಭಾ, ವಿಜಯ. ಸರ್ವಸಿದ್ಧಿ ಈ ನವಶಕ್ತಿ ದೇವತೆಗಳು ಸಂತುಷ್ಟರಾಗುವರು. ಈ ರುದ್ರಾಕ್ಷಿಗಳು ಭೈರವ ಸ್ವರೂಪರೆಂದೂ ಕೆಲವರ ಅಭಿಮತ. ಈ ರುದ್ರಾಕ್ಷಿ ಧರಿಸಿದರೆ ಸರ್ವ ವಿಧದ ಕಷ್ಟ, ಯಂತ್ರ-ಮಂತ್ರ, ಮಾಟ, ಮದ್ದುಗಳ ಉಪದ್ರವ, ವಿರೋಧಿಗಳ ಕಾಟ, ಇವೆಲ್ಲ ಪರಿಹಾರವು. ರೋಗನಿವಾರಣೆಯೂ ಆಗುವದು. ರಾಜ ವಶೀಕರಣವೂ ಆಗುವದು. ಮತ್ತು ಅಕಾಲ ಮರಣ ಭಯ ದೂರಾಗುವದು.

### ಬೀಜಾಕ್ಷರ ಮಂತ್ರ

ಓಂ ಹ್ರೀಂ ವೇಂ ಯಂ ರಂ ಲಂ ನಮಃ ॥

ಈ ಮಂತ್ರವನ್ನು ಒಂದು ಸಾರೆ, ಹನ್ನೊಂದು ಸಾರೆ ಅಥವಾ ಒಂದುನೂರಾ ಎಂಟು ಸಾರೆ ಜಪಿಸಿ ಧರಿಸಿಕೊಳ್ಳಬೇಕು.

## ಹತ್ತು (ದಶಮುಖ) ಮುಖದ ರುದ್ರಾಕ್ಷಿ

ದಶವಕ್ತ್ರಂತು ರುದ್ರಾಕ್ಷಂ ಯಮದೈವ ಮುದಾಹೃತಂ ।
ತಥಾಸ್ಯ ಪ್ರೀತಿಜನಕಂ ಧಾರಣೇನಾತ್ರ ಸಂಶಯಃ ॥

ಎಂಬ ಚಂದ್ರಜ್ಞಾನಾಗಮ ಸೂತ್ರಾನುಸಾರ ಹತ್ತು ಮುಖದ ರುದ್ರಾಕ್ಷಿಯು ಸಾಕ್ಷಾತ್ ದಶದಿಕ್‌ಪಾಲಕರ ಸ್ವರೂಪವು ಕೆಲವರು ಜನಾರ್ದನ ಸ್ವರೂಪವೆಂದೂ ಹೇಳುತ್ತಾರೆ. ಈ ರುದ್ರಾಕ್ಷಿಯನ್ನು ಧರಿಸುವದರಿಂದ ಭೂತ, ಪಿಶಾಚಿಗಳ ಬಾಧೆಯು, ಸರ್ಪಭಯವು. ಬರಲಿರುವ ಘೋರವಿಪತ್ತುಗಳು ದೂರಾಗುವವು ಹಾಗೂ ಗೃಹಶಾಂತಿಯು, ಸಂತಾನ ಪ್ರಾಪ್ತಿಯು, ಸರ್ವ ಸೌಭಾಗ್ಯದಾಯಕವು. ಸರ್ವ ಕಾರ್ಯಸಿದ್ಧಿಯು, ಸರ್ವ ಜನರಿಂದ ಗೌರವಾದರಗಳನ್ನು ಪಡೆಯುವನು. ವಿಷ್ಣುವು ಈ ರುದ್ರಾಕ್ಷಿಯ ಅಧಿದೇವತೆಯು.

### ಬೀಜಾಕ್ಷರ ಮಂತ್ರ

ಓಂ ಶ್ರೀಂ ಹ್ರೀಂ ಕ್ಲೀಂ ವ್ರೀಂ ಓಂ ನಮಃ ॥

ಈ ಮಂತ್ರವನ್ನು ಒಂದುಸಾರೆ, ಹನ್ನೊಂದುಸಾರೆ ಅಥವಾ ಒಂದು ನೂರಾ ಎಂಟುಸಾರೆ ಜಪಿಸಿ ಧರಿಸಿಕೊಳ್ಳಬೇಕು.

## ಹನ್ನೊಂದು (ಏಕಾದಶ) ಮುಖದ ರುದ್ರಾಕ್ಷಿ

ಏಕಾದಶ ಮುಖಂ ಚಾಕ್ಷಂ ರುದ್ರೈಕಾದಶ ದೈವತಂ ।
ತದಿಂದ್ರ ದೈವತಂ ಪ್ರೋಕ್ತಂ ಸದಾ ಸೌಭಾಗ್ಯವರ್ಧನಂ ॥

ಎಂಬ ಚಂದ್ರಜ್ಞಾನಾಗಮ ವಾಕ್ಯದಂತೆ ಹನ್ನೊಂದು ಮುಖದ ರುದ್ರಾಕ್ಷಿಯು ಸಾಕ್ಷಾತ್ ಏಕಾದಶ ರುದ್ರಸ್ವರೂಪವು. ಶಂಭು, ಪಿನಾಕಿ, ಗಿರೀಶ, ಸ್ಥಾಣು, ಭರ್ಗ, ಸದಾಶಿವ, ಶಿವ, ಹರ, ಶರ್ವ, ಕಪಾಲಿ, ಭವ ಈ ಹನ್ನೊಂದು ಜನ ರುದ್ರರು ಈ ರುದ್ರಾಕ್ಷಿಯ ಅಧಿದೇವತೆಗಳು. ಈ ರುದ್ರಾಕ್ಷಿಯನ್ನು ಧರಿಸುವದರಿಂದ ಸದಾವ ಕಾಲದಲ್ಲಿ ಸುಖ ಶಾಂತಿ ಪ್ರಾಪ್ತಿಯು, ಒಂದು ಸಾವಿರ ಅಶ್ವಮೇಧ ಯಜ್ಞಗಳನ್ನು ಮಾಡಿದ ಫಲವು. ಈ ರುದ್ರಾಕ್ಷಿ ಧಾರಣೆಯಿಂದ ಪ್ರಾಪ್ತವಾಗುವದು. ಮಹಾರೋಗಾದಿಗಳನ್ನು ನಿವಾರಣೆ ಮಾಡುವದು. ಹಾಗೂ ದೇಹದಲ್ಲಿ ಆರೋಗ್ಯ, ಉತ್ಸಾಹ, ವೀರ್ಯವೃದ್ಧಿಯನ್ನು ಸಹ ಉಂಟು ಮಾಡುವದು. ಬ್ರಹ್ಮಚಾರಿಗಳು ಮತ್ತು ಸನ್ಯಾಸಿಗಳು ಈ ರುದ್ರಾಕ್ಷಿ ಧಾರಣೆಯಿಂದ ರುದ್ರಸ್ವರೂಪರೇ ಆಗುತ್ತಾರೆ. ಮತ್ತು ಗೃಹಸ್ಥರಿಗೆ ಇಚ್ಛಿಸಿದ ಫಲವನ್ನು ಕೊಡುವ ಕಾಮಧೇನುವಾಗಿರುತ್ತದೆ.

### ಬೀಜಾಕ್ಷರ ಮಂತ್ರ

ಓಂ ರುಂ ಮೂಂ ಯ್ಯಾಂ ಕ್ರಾಂ ನಮಃ ॥

ಈ ಮಂತ್ರವನ್ನು ಒಂದುಸಾರೆ, ಹನ್ನೊಂದುಸಾರೆ ಅಥವಾ ಒಂದು ನೂರಾ ಎಂಟು ಸಾರೆ ಜಪಿಸಿ ಧರಿಸಿಕೊಳ್ಳಬೇಕು.

## ಹನ್ನೆರಡು (ದ್ವಾದಶ) ಮುಖದ ರುದ್ರಾಕ್ಷಿ

ರುದ್ರಾಕ್ಷಂ ದ್ವಾದಶ ಮುಖಂ ಮಹಾವಿಷ್ಣು ಸ್ವರೂಪಕಂ ।
ದ್ವಾದಶಾದಿತ್ಯ ದೈವಾಚ ದೇವತಾ ಪ್ರೀತಿ ವರ್ಧನಂ ॥

ಎಂಬ ಚಂದ್ರಜ್ಞಾನಾಗಮ ವಚನದಂತೆ ಹನ್ನೆರಡು ಮುಖದ ರುದ್ರಾಕ್ಷಿಯು ಸಾಕ್ಷಾತ್ ಭಗವಾನ್ ವಿಷ್ಣು ಸ್ವರೂಪವು. ದ್ವಾದಶಾದಿತ್ಯರು ಈ ಹನ್ನೆರಡು ಜನ ಆದಿತ್ಯ ದೇವತೆಗಳು) ಇದರ ಅಧಿದೇವತೆಗಳು ಧಾತೃ,



ಅರ್ಯಮ, ಮಿತ್ರ, ಅರುಣ, ಇಂದ್ರ, ವಿವಸ್ವತ್, ತ್ವಷ್ಟ್ರ, ವಿಷ್ಣು, ಅಂಶು, ಭಗ, ಪೂಷಾ, ಪರ್ಜನ್ಯ ಈ ಹನ್ನೆರಡು ಜನ ಆದಿತ್ಯರು ಈ ರುದ್ರಾಕ್ಷಿಯ ಅಧಿದೇವತೆಗಳು ಈ ರುದ್ರಾಕ್ಷಿಯನ್ನು ಶಿಖೆಯಲ್ಲಿ ಧರಿಸುವದರಿಂದ ಮಹಾರೋಗ ಪರಿಹಾರವು ಸುಖವು ಕಿವಿಯಲ್ಲಿ ಧರಿಸುವದರಿಂದ ಹನ್ನೆರಡು ಜನ ಸೂರ್ಯರನ್ನು ಪೂಜಿಸಿದ ಫಲವು. ಕಂಠದಲ್ಲಿ ಧರಿಸಿದರೆ ಗೋಹತ್ಯಾ ಮನುಷ್ಯ ಹತ್ಯಾದೋಷ ನಿವಾರಣೆಯು. ಅಗ್ನಿಭಯ, ಚೋರಭಯ, ಸಿಂಹ, ಶಾರ್ದುಲಾದಿ ಕಾಡುಮೃಗಗಳ ಭಯವುಂಟಾಗುವದಿಲ್ಲ ಪರ್ವಕಾಲದಲ್ಲಿ ಧರಿಸಿದರೆ ಸಂಪದಭಿವೃದ್ಧಿಯು ಸರ್ವಜನವಶೀಕರಣವು, ಶತ್ರುಗಳಬಾಧೆಯೂ ಆಗಲಾರದು.

### ಬೀಜಾಕ್ಷರ ಮಂತ್ರ

ಓಂ ಹ್ರೀಂ ಕ್ಷಾಂ ಘೃಣಿಹಃ ಶ್ರೀಂ ನಮಃ ॥

ಈ ಮಂತ್ರವನ್ನು ಒಂದುಸಾರೆ, ಹನ್ನೊಂದುಸಾರೆ ಅಥವಾ ಒಂದು ನೂರಾ ಎಂಟುಸಾರೆ ಜಪಿಸಿ ಧಾರಣೆ ಮಾಡಿಕೊಳ್ಳಬೇಕು.

## ಹದಿಮೂರು (ತ್ರಯೋದಶ) ಮುಖದ ರುದ್ರಾಕ್ಷಿ

ತ್ರಯೋದಶ ಮುಖಂ ಚಾಕ್ಷಂ ಕಾಮದಂ ಶುದ್ಧಿದಂ ಶುಭಂ ।
ತಸ್ಯಧಾರಣ ಮಾತ್ರೇಣ ಕಾಮದೇವಃ ಪ್ರಸೀದತಿ ॥

ಎಂಬ ಚಂದ್ರಜ್ಞಾನಾಗಮ ವಾಕ್ಯದಂತೆ ಹದಿಮೂರು ಮುಖದ ರುದ್ರಾಕ್ಷಿಯು ಸಾಕ್ಷಾತ್ ಕಾಮದೇವ ಸ್ವರೂಪವು ಕೆಲವರು ಕಾರ್ತಿಕೇಯ ಸ್ವರೂಪವೆಂದೂ ಹೇಳುತ್ತಾರೆ. ನಾಥ ಸಂಪ್ರದಾಯದವರು ಇಂದ್ರನ ಸ್ವರೂಪವೆಂದೂ ಹೇಳುತ್ತಾರೆ. ಕಾರ್ತಿಕೇಯನು ಈ ರುದ್ರಾಕ್ಷಿಯ ಅಧಿದೇವತೆಯು. ಈ ರುದ್ರಾಕ್ಷಿಯನ್ನು ಧರಿಸಿಕೊಂಡರೆ ಸಂತಾನಫಲ ಪ್ರಾಪ್ತಿಯು. ಬ್ರಹ್ಮಚಾರಿಗಳಾದ ವಿದ್ಯಾರ್ಥಿಗಳು ಧರಿಸಿಕೊಂಡರೆ ವಿದ್ಯಾಭಿವೃದ್ಧಿಯು. ಆರೋಗ್ಯವು, ಉತ್ಸಾಹವು, ವೀರ್ಯವೃದ್ಧಿಯು. ಗೃಹಸ್ಥರು ಧರಿಸಿಕೊಂಡರೆ ಸುಖ ಸಂತೋಷವು. ಕಾಮಧೇನುವಿಂತೆ ಸಕಲ ಅಪೇಕ್ಷೆಗಳನ್ನು ಪೂರ್ಣಗೊಳಿಸುವದು ಸನ್ಯಾಸಿಗಳು ಧರಿಸಿದರೆ ಮುಕ್ತಿಪ್ರದವು. ರಾಜಕಾರಣಿಗಳಿಗೆ (ಮಂತ್ರಿ ಪದವಿ ವಗೈರೆ) ಅಧಿಕಾರ ಪ್ರಾಪ್ತಿಯು, ಸರ್ವಕಾರ್ಯ ಸಿದ್ಧಿಯು.

## ಬೀಜಾಕ್ಷರ ಮಂತ್ರ

ಓಂ ಇಂ ಯಂ ನಮಃ ॥

ಈ ಮಂತ್ರವನ್ನು ಒಂದುಸಾರೆ, ಹನ್ನೊಂದುಸಾರೆ ಅಥವಾ ಒಂದು ನೂರಾ ಎಂಟುಸಾರೆ ಜಪಿಸಿ ಈ ರುದ್ರಾಕ್ಷಿಯನ್ನು ಧಾರಣೆ ಮಾಡಿಕೊಳ್ಳ ಬೇಕು.

## ಹದಿನಾಲ್ಕು [ಚತುರ್ದಶ] ಮುಖದ ರುದ್ರಾಕ್ಷಿ

ಚತುರ್ದಶ ಮುಖಂ ಚಾಕ್ಷಂ ರುದ್ರನೇತ್ರ ಸಮುದ್ಭವಂ ।
ಸರ್ವವ್ಯಾಧಿಹರಂ ಚೈವ ಸದಾರೋಗ್ಯಮವಾಪ್ನುಯಾತ್ ॥

ಎಂಬ ಚಂದ್ರಜ್ಞಾನಾಗಮ ಸೂತ್ರದಂತೆ ಹದಿನಾಲ್ಕು ಮುಖದ ರುದ್ರಾಕ್ಷಿಯು ಸಾಕ್ಷಾತ್ ಶಿವಶಂಕರ ಸ್ವರೂಪವು. ಶ್ರೀಕಂಠನು ಇದರ ಅಧಿದೇವತೆಯು ಈ ರುದ್ರಾಕ್ಷಿಯನ್ನು ಧರಿಸುವದರಿಂದ ನಿರ್ಮಲ ಮನಸ್ಸಿನವರೂ, ಸೌಭಾಗ್ಯವಂತರೂ, ಸದಾ ಆರೋಗ್ಯವಂತರೂ ಆಗುವರು. ಸರ್ವವ್ಯಾಧಿಗಳು ನಿವಾರಣೆಯಾಗುವವು. ಜೀವನದಲ್ಲಿ ಸುಖ ಶಾಂತಿ ಸಮೃದ್ಧಿದಾಯಕವು ಜನವಶ್ಯ, ರಾಜವಶ್ಯಗಳನ್ನುಂಟು ಮಾಡುವದಲ್ಲದೆ ಕಾರ್ಯಸಿದ್ಧಿಯನ್ನೂ, ವಿರೋಧಿಗಳನ್ನು ಶರಣಾಗತರನ್ನಾಗಿಯೂ ಮಾಡುತ್ತವೆ. ಮತ್ತು ಕೀರ್ತಿದಾಯಕವೂ ಆಗಿವೆ.

## ಬೀಜಾಕ್ಷರ ಮಂತ್ರ

ಓಂ ಹ ಸ್ಫೇಂ ಖಫ್ರೃ ಹಸ್ರೌಂ ಹಸ್ಯೈವ್ಭ ನಮಃ ॥

ಈ ಮಂತ್ರವನ್ನು ಒಂದುಸಾರೆ, ಹನ್ನೊಂದುಸಾರೆ ಅಥವಾ ಒಂದು ನೂರಾ ಎಂಟುಸಾರೆ ಜಪಿಸಿ ನಂತರ ಈ ರುದ್ರಾಕ್ಷಿಯನ್ನು ಧರಿಸಿಕೊಳ್ಳಬೇಕು.

## ರುದ್ರಾಕ್ಷಿ ಧರಿಸುವ ನಿಯಮ

ರುದ್ರನೇತ್ರ ಸಮುತ್ಪನ್ನಾ ರುದ್ರಾಕ್ಷಾ ಲೋಕಪಾವನಾಃ ।
ಅಷ್ಟತ್ರಿಂಶತ್ಪ್ರಭೇದೇನ ಭವಂತ್ಯುತ್ಪತ್ತಿಭೇದತಃ ॥



ಎಂಬಂತೆ ರುದ್ರನ ನೇತ್ರದಿಂದ ಉತ್ಪನ್ನನಾಗಿ ಲೋಕ ಪಾವನವಾಗಿರುವ ಈ ರುದ್ರಾಕ್ಷಿಗಳು ಉತ್ಪತ್ತಿ ಭೇದದಿಂದ ಮೂವತ್ತೆಂಟು (೩೮) ವಿಧವಾಗಿದ್ದರೂ ಇವುಗಳಲ್ಲಿ ಹದಿನಾಲ್ಕು ಮುಖದ ವರೆಗೆ ಇರುವ ರುದ್ರಾಕ್ಷಿಗಳನ್ನೇ ಬಹುಜನರು ಅಧಿಕವಾಗಿ ಉಪಯೋಗಿಸುತ್ತಾರೆ ಪ್ರಯುಕ್ತ ನಾವು ಹದಿನಾಲ್ಕು ಮುಖಗಳ ರುದ್ರಾಕ್ಷಿಗಳ ಬಗೆಗೆ ವಿವರಣೆ ಕೊಟ್ಟಿದ್ದೇವೆ. ಆದರೆ ಈ ರುದ್ರಾಕ್ಷಿಗಳನ್ನು ಜಾತಿ, ಮತ, ಪಂಥಭೇದವಿಲ್ಲದೆ ಸಮಸ್ತರೂ ಧರಿಸಿಕೊಳ್ಳಬಹುದು. ಆದರೆ ಅವುಗಳನ್ನು ಧರಿಸಿಕೊಳ್ಳುವ ಪೂರ್ವದಲ್ಲಿ ರುದ್ರಾಕ್ಷಿಗಳ ಬೀಜಾಕ್ಷರ ಮಂತ್ರಗಳನ್ನು ಜಪಮಾಡಿ ಆ ಬಳಿಕ ಪ್ರಣವ ಸಹಿತವಾದ ಷಡಕ್ಷರ ಮಂತ್ರವನ್ನು ಜಪಮಾಡಿ ಸದ್ಗುರುವಿನ ಮುಖಾಂತರ ಅನುಗ್ರಹಿಸಿಕೊಂಡು ಧರಿಸಿಕೊಳ್ಳಬೇಕು.

## ಶಂಕರ ಸಂಹಿತೆಯಲ್ಲಿ

ಯಸ್ಯಾಂಗೇ ನಾಪಿ ರುದ್ರಾಕ್ಷಏಕೋಪಿ ಬಹು ಪುಣ್ಯತಃ ।
ತಸ್ಯಜನ್ಮನಿರರ್ಥಂಸ್ಯಾತ್ ತ್ರಿಪುಂಡ್ರ ರಹಿತಂ ಯದಾ ॥

ಭಸ್ಮತ್ರಿ ಪುಂಡ್ರವನ್ನು ಧರಿಸದೆ ಇರುವವನ ಜನ್ಮವು ಹೇಗೆ ವ್ಯರ್ಥವಾಗುವದೋ ಹಾಗೆಯೇ ಬಹುಪುಣ್ಯವನ್ನುಂಟು ಮಾಡುವ ಒಂದು ರುದ್ರಾಕ್ಷಿಯಾದರೂ ಯಾವನ ದೇಹದ ಮೇಲೆ ಇರುವದಿಲ್ಲವೋ ಅವನ ಜನ್ಮವು ನಿರರ್ಥಕವಾಗುವದು.

ಭಸ್ಮನಾ ವಿಹಿತಸ್ನಾನ ಸ್ತ್ರಿಪುಂಡ್ರಾಂಕಿತ ಮಸ್ತಕಃ ।
ಶಿವಾರ್ಚನ ಪರೋನಿತ್ಯಂ ರುದ್ರಾಕ್ಷಮಪಿ ಧಾರಯೇತ್ ॥

ಎಂಬ ಸಿದ್ಧಾಂತ ಶಿಖಾಮಣಿ ಗ್ರಂಥಕಾರರ ಅಭಿಪ್ರಾಯದಂತೆ ಭಸ್ಮಸ್ನಾನಯುತನಾಗಿ ತ್ರಿಪುಂಡ್ರಾಂಕಿತ ಮಸ್ತಕವುಳ್ಳವನಾಗಿ ಶಿವಾರ್ಚನೆಯಲ್ಲಿ ಆಸಕ್ತರಾಗಿರುವವರೆಲ್ಲರೂ ಪ್ರತಿದಿವಸ ರುದ್ರಾಕ್ಷಿಗಳನ್ನು ಧರಿಸಿಕೊಳ್ಳುವದು ಶ್ರೇಯಸ್ಕರವಾದುದು.

## ಹವಳ, ಮುತ್ತು, ಸ್ಫಟಿಕಯುಕ್ತ ರುದ್ರಾಕ್ಷಿ

ಮುಕ್ತಾ ಪ್ರವಾಲ ಸ್ಫಟಿಕ ಪುಷ್ಪವೈಢೂರ್ಯ ಕಾಂಚನೈಃ |
ಸಮೇತಾನ್ ಧಾರಯೇದ್ಯಸ್ತು ರುದ್ರಾಕ್ಷಾನ್ ಸಶಿವೋಭವೇತ್ ||

ಮುತ್ತು, ಹವಳ, ಸ್ಫಟಿಕ, ಪುಷ್ಪ ವೈಢೂರ್ಯ, ಬಂಗಾರ ಸಮೇತವಾಗಿ ರುದ್ರಾಕ್ಷಿಗಳನ್ನು ಧರಿಸಿಕೊಳ್ಳುವದು ಬಹು ಶ್ರೇಷ್ಠತಮವಾದುದು ಆದ್ದರಿಂದ ಬಂಗಾರದ ತಂತಿಯಲ್ಲಿ ಮುತ್ತು ಹವಳ, ಸ್ಫಟಿಕಗಳ ಜೊತೆಗೆ ರುದ್ರಾಕ್ಷಿಗಳನ್ನೂ ಕೂಡಿಸಿ ಮಾಲೆಮಾಡಿ ಧರಿಸಿಕೊಳ್ಳುವದು ಹೆಚ್ಚು ಉತ್ತಮ.

## ಮಂತ್ರ ಜಪದ ವಿಚಾರ

ಮಂತ್ರ ಎಂದರೆ ಗೌಪ್ಯವಾಗಿ ಉಚ್ಚರಿಸುವದು ಎಂದು ಅರ್ಥ. ಆದರಂತೆ ರಹಸ್ಯ ಸಂಗತಿಗಳನ್ನು ಗೌಪ್ಯವಾಗಿ ಇಡತಕ್ಕವನು ಮಂತ್ರಿ. ಮಂತ್ರಜಪವನ್ನು ಮೂರು ವಿಧವಾಗಿ ಮಾಡಬಹುದು. ವಾಚಕ, ಉಪಾಂಶು, ಮಾನಸ ಎಂದು ಜಪವು ಮೂರು ಪ್ರಕಾರವಾಗಿದ್ದು, ಮಂತ್ರ ಜಪ ಮಾಡುವಾಗ ಸಮೀಪ (ಮಗ್ಗುಲಲ್ಲಿ) ದಲ್ಲಿ ಕುಳಿತವರಿಗೆ ಮಾತ್ರ ಕೇಳುವಂತೆ ಮಾಡುವ ಮಂತ್ರೋಚ್ಚಾರಣೆಯು ವಾಚಕ ಜಪವೆನಿಸುವದು. ಕೆಲವರು ಪಂಚಾಕ್ಷರ ಮಂತ್ರವನ್ನು ದೊಡ್ಡ ಧ್ವನಿಯಿಂದ ಕೂಗುತ್ತಾರೆ. ಆಗ ಪಂಚಾಕ್ಷರ ಮಂತ್ರವು ತನ್ನ ಮಂತ್ರದ ಮಹತಿಯನ್ನು ಕಳೆದುಕೊಳ್ಳುತ್ತದೆ ಅರ್ಥಾತ್ ಅದು ಆಗ ಮಂತ್ರವಾಗಲಾರದು. ತುಟಿಯನ್ನು ಮಾತ್ರ ಸ್ವಲ್ಪ ಅಲ್ಲಾಡಿಸುತ್ತ ಮಗ್ಗುಲಲ್ಲಿ ಕುಳಿತಿರುವವರಿಗೂ ಸಹ ಕೇಳಿಸದ ಹಾಗೆ ಮೆಲ್ಲಗೆ ಮಾಡುವ ಜಪವು ಉಪಾಂಶು ಜಪವೆನಿಸುವದು. ತುಟಿಗಳು ಮತ್ತು ನಾಲಿಗೆಯೂ ಸಹ ಅಲುಗಾಡದೆ ಮಂತ್ರಾಕ್ಷರ ಸ್ವರೂಪವುಳ್ಳ ಚಿತ್ತದಿಂದ ಧ್ಯಾನಿಸಲ್ಪಡುವ ಜಪವು ಮಾನಸ ಜಪವು. ಇನ್ನು ವಾಚಕ ಜಪಕ್ಕಿಂತ ಉಪಾಂಶು ಜಪವು ೧೦೦ (ನೂರು) ಪಾಲು ಮಿಗಿಲಾದುದು ಮತ್ತು ಉಪಾಂಶು ಜಪಕ್ಕಿಂತ ಮಾನಸ ಜಪವು ಶ್ರೇಷ್ಠವಾದುದು.

ರುದ್ರಾಕ್ಷಿ ಮಾಲೆಯಿಂದ ಜಪಿಸುವದಾದರೆ ಮೊದಲು ಆ ಮಾಲಿಕೆಯನ್ನು ಪೂಜಿಸಿ ದಕ್ಷಿಣ (ಬಲ) ಹಸ್ತದಲ್ಲಿ ಪರಿಗ್ರಹಿಸಿ ವಸ್ತ್ರವನ್ನು ಮುಚ್ಚಿ ವಾಚಕ ಜಪ ಮಾಡುವದಾದರೆ ಮಧ್ಯಮಾಂಗುಲಿಯ ಮೇಲಿರಿಸಿ ತರ್ಜನಿ,



ಅಂಗುಷ್ಠ ಬೆರಳುಗಳ ಸಂಯೋಗದಿಂದಲೂ, ಉಪಾಂಶು ಜಪ ಮಾಡುವದಾದರೆ ಅನಾಮಿಕ ಬೆರಳ ಮೇಲೆ ಇಟ್ಟು ಮಧ್ಯಮ ಅಂಗುಷ್ಠ ಬೆರಳ ಸಂಬಂಧದಿಂದ ಮಾನಸಜಪ ಮಾಡುವದಾದರೆ ಕಿರಿಬೆರಳ ಮೇಲೆ ಇಟ್ಟು ಅನಾಮಿಕ ಅಂಗುಷ್ಠ ಬೆರಳುಗಳು ಸಮ್ಮಿಲನದಿಂದಲೂ ಗಣನೆ ಮಾಡಬೇಕು. ಈ ಪ್ರಕಾರ ಶಾಸ್ತ್ರ ಪದ್ಧತಿ ಯನ್ನು ಅರಿತುಕೊಳ್ಳಬೇಕೆಂಬ ಇಚ್ಛೆ ಇದ್ದವರು ಗುರುಮುಖೇನ ತಿಳಿದು ಕೊಳ್ಳಬೇಕು.

## ಜಪದಲ್ಲಿ ರುದ್ರಾಕ್ಷಿ ಮಾಲೆಯ ಆವಶ್ಯಕತೆ

ಅಂಗುಲ್ಯಾಜಪ ವಾಕಃ ಸ್ಯಾತ್ ರೇಖಯಾ ಅಷ್ಟಗುಣೋ ಭವೇತ್ |
ಜಪಸ್ತು ಶಂಖ ಮಣಿನಾಶ ತಮಷ್ಟೋತ್ತರಂ ಭವೇತ್ ||
ಜಪಸ್ತು ಪುತ್ರಜೀವೇನಭವೇದೇವ ಶತತ್ರಯಮ್ |
ಪದ್ಮಾಕ್ಷೇಣ ಸಹಸ್ರಂ ಸ್ಯಾತ್ ಸ್ಫಟಿಕೇನಾಯುತತ್ರಯಮ್ ||
ಕೋಟಿ ಕೋಟಿಃ ಕುಶ ಗ್ರಂಥ್ಯಾ ರುದ್ರಾಕ್ಷೇಣಾಂ ತವರ್ಜಿತಃ |
ಅತಃಸರ್ವ ಪ್ರಯತ್ನೇನ ರುದ್ರಾಕ್ಷೈಃ ಸರ್ವದಾ ಜಪೇತ್ |

ಅಂಗುಲಿ ಜಪವು ಜಪಮಾಡುವ ಒಂದು ವಿಧಾನವು. ಅಂಗುಲಿ ಜಪಕ್ಕಿಂತ ರೇಖಾ ಜಪವು ಎಂಟುಪಟ್ಟು ಉತ್ತಮವು. ಶಂಖಮಣಿಯಿಂದ ಮಾಡುವ ಜಪವು ೧೦೮ ಪಟ್ಟು ಉತ್ತಮವು. ಪುತ್ರ ಜೀವಮಾಲೆಯಿಂದ ಮಾಡುವ ಜಪವು ೩೦೦ ಪಟ್ಟು ಉತ್ತಮವು. ಕಮಲಗಳಿಂದ ಮಾಡುವ ಜಪವು ಸಹಸ್ರಪಟ್ಟು ಉತ್ತಮವು ಸ್ಫಟಿಕಗಳಿಂದ ಮಾಡುವ ಜಪವು ಮೂರು ಸಹಸ್ರಪಟ್ಟು ಉತ್ತಮವು ಕುಶ(ದರ್ಭೆಗಳ) ಗಂಟುಗಳಿಂದ ಮಾಡುವ ಜಪವು ೧ ಕೋಟಿ ಪಟ್ಟು ಉತ್ತಮವು ಇವೆಲ್ಲವುಗಳಿಗಿಂತ ರುದ್ರಾಕ್ಷಿ ಮಾಲೆಯಿಂದ ಮಾಡುವ ಜಪವು ಸರ್ವಶ್ರೇಷ್ಠವಾಗಿರುವದರಿಂದ ಎಲ್ಲಾ ಪ್ರಯತ್ನ ಮಾಡಿ ಸರ್ವದಾ ರುದ್ರಾಕ್ಷಿ ಮಾಲೆಯಿಂದ ಜಪಿಸಬೇಕು. ಪುತ್ರಜೀವ ಮಾಲೆಯು ಇದು ಒಂದು ಗಿಡದ ಫಲವು ಇದಕ್ಕೆ ಮುಖವಿರುವದಿಲ್ಲ ಸಂತಾನವಿಲ್ಲದವರು ಈ ಮಾಲೆಯಿಂದ ಜಪಿಸಿದರೆ ಪುತ್ರಸಂತಾನವಾಗುವದು.

## ಧರಿಸಲು ಯೋಗ್ಯ ರುದ್ರಾಕ್ಷಿಗಳು

ನೆಲ್ಲಿಕಾಯಿಯಷ್ಟು ದಪ್ಪ ಇರುವ ರುದ್ರಾಕ್ಷಿಗಳು ಉತ್ತಮವು. ಬೋರಿಕಾಯಿಯಷ್ಟು ದಪ್ಪವುಳ್ಳ ರುದ್ರಾಕ್ಷಿಗಳು ಮಧ್ಯಮವು. ಕಡಲೆ ಕಾಳಿನಷ್ಟು

ದಪ್ಪವುಳ್ಳ ರುದ್ರಾಕ್ಷಿಗಳು ಕನಿಷ್ಠವಾದವುಗಳು ಆಸನಗಳ ಮೇಲೆ ಕೂಡ್ರದೆ ಜಪ ಮಾಡಬಾರದು. ಸಂಖ್ಯಾಹೀನ ಜಪವೂ ಸಹಿತ ನಿಷ್ಫಲವಾದುದಾಗಿದೆ.

ರುದ್ರಾಕ್ಷಿಗಳು ದೇಹದ ಮೇಲೆ ಇದ್ದರೆ ಅಮುವಾತವು ಕಡಿಮೆಯಾಗುವದು, ಇದು ಮಾನಸಿಕ ಭ್ರಮೆಯನ್ನು ಹೋಗಲಾಡಿಸುವದು ಮತ್ತು ಅಪಸ್ಮಾರ, ಉನ್ಮಾದ ವಗ್ಯೆರೆ ರೋಗಗಳನ್ನು ನಿವಾರಿಸುವದು. ಆರೋಗ್ಯ ವರ್ಧಕವೂ ಆಗಿದೆ ರುದ್ರಾಕ್ಷಿಯನ್ನು ತೇಯ್ದು ಗಂಧವನ್ನು ಪ್ರತಿದಿವಸ ಸೇವಿಸಿದರೆ ವಾಕ್ ತಂತುಗಳ ವಿಕಾರವನ್ನು ಶಮನಗೊಳಿಸುತ್ತದೆ ರುದ್ರಾಕ್ಷಿ ತೇಯ್ದು ಗಂಧವು ನಾಲಿಗೆಯನ್ನು ಮೃದುಗೊಳಿಸುತ್ತದೆ ರುದ್ರಾಕ್ಷಿಯನ್ನು ಕುದಿಸಿದ ನೀರಿನಿಂದ ಕಣ್ಣು ತೊಳೆದರೆ ಕಣ್ಣುಬೇನೆ ನಿವಾರಣೆಯಾಗುವದು.

## ಗೌರೀಶಂಕರ ರುದ್ರಾಕ್ಷಿ

ಈ ರುದ್ರಾಕ್ಷಿಯು ಶಿವ ಹಾಗೂ ಶಕ್ತಿ ಇವರ ಅವಿನಾಭಾವ ಸಂಬಂಧವನ್ನು ತೋರಿಸುವದು ಇದು ಉಮಾಮಹೇಶ್ವರ ಸ್ವರೂಪವು ಈ ರುದ್ರಾಕ್ಷಿಗಳು ಎರಡು ಮುಖದಿಂದ ಹದಿನಾಲ್ಕು ಮುಖಗಳ ವರೆಗೆ ಇರುವವು. ಇವುಗಳಲ್ಲಿ ಎರಡು ಮುಖ ಇರುವ ರುದ್ರಾಕ್ಷಿಯೇ ಬಹಳ ಶ್ರೇಷ್ಠವಾದದ್ದು ನಾಲ್ಕು ಮುಖಗಳುಳ್ಳದ್ದು ಬ್ರಹ್ಮಸ್ವರೂಪವು ಪಂಚಮುಖವುಳ್ಳದ್ದು ಶಿವಸ್ವರೂಪವು ಆರು ಮುಖವುಳ್ಳದ್ದು ಷಣ್ಮುಖ ಸ್ವರೂಪವು ಎಂಟು ಮುಖವುಳ್ಳದ್ದು ಅಷ್ಟಲಕ್ಷ್ಮೀ ಸ್ವರೂಪವು. ಈ ಪ್ರಕಾರ ಹದಿನಾಲ್ಕು ಮುಖಗಳ ವರೆಗೆ ರುದ್ರಾಕ್ಷಿಗಳಿರುವವು.

## ದ್ವಾದಶ ರಾಶಿಗಳಿಗೆ ರುದ್ರಾಕ್ಷಿಗಳು

| ರಾಶಿ | ಅಧಿಪತಿ | ರುದ್ರಾಕ್ಷಿ ಮುಖಗಳು |
|---|---|---|
| ಮೇಷ | ಮಂಗಳ | ಎರಡು ಮುಖ |
| ವೃಷಭ | ಶುಕ್ರ | ಆರು ಮುಖ |
| ಮಿಥುನ | ಬುಧ | ನಾಲ್ಕು ಮುಖ |
| ಕರ್ಕ | ಚಂದ್ರ | ಐದು ಮುಖ |
| ಸಿಂಹ | ಸೂರ್ಯ | ಏಳು ಮುಖ |
| ಕನ್ಯಾ | ಬುಧ | ಮೂರು ಮುಖ |
| ತುಲಾ | ಶುಕ್ರ | ಒಂಭತ್ತು ಮುಖ |
| ವೃಶ್ಚಿಕ | ಮಂಗಳ | ಹತ್ತು ಮುಖ |
| ಧನು | ಗುರು | ಹನ್ನೊಂದು ಮುಖ |
| ಮಕರ | ಶನಿ | ಒಂದು ಮುಖ |
| ಕುಂಭ | ಶನಿ | ಹದಿನಾಲ್ಕು ಮುಖ |
| ಮೀನ | ಗುರು | ಹನ್ನೆರಡು ಮುಖ |



ತಮ್ಮ ತಮ್ಮ ನಾಮಗಳಿಗೆ ಆಗುವ ರಾಶಿಗಳ ಪ್ರಕಾರ ಆಯಾ ರಾಶಿಗಳಿಗೆ ತಿಳಿಸಿದಂತೆ ಅಷ್ಟು ಮುಖದ ರುದ್ರಾಕ್ಷಿಗಳನ್ನು ಧರಿಸುವದು ಉತ್ತಮವು. ತಮ್ಮ ತಮ್ಮ ವ್ಯವಹಾರನಾಮ ಅಥವಾ ಜನ್ಮನಾಮದ ಮೊದಲಿನ ಅಕ್ಷರಗಳಿಂದ ತಮ್ಮ ತಮ್ಮ ರಾಶಿಗಳನ್ನು ತಿಳಿದುಕೊಂಡು ಆಯಾ ರಾಶಿಗಳಿಗೆ ಯೋಗ್ಯವಾದ ರುದ್ರಾಕ್ಷಿಗಳನ್ನು ಧರಿಸಿಕೊಳ್ಳುವದು ಶುಭಕರ.

## ಆಯಾ ರಾಶಿಗಳಿಗೆ ಅಕ್ಷರಗಳು

| | |
|---|---|
| ಮೇಷ | ಚು ಚೆ ಚೊ ಲ ಲಿ ಲು ಲೆ ಲೊ ಅ |
| ವೃಷಭ | ಇ ಉ ಎ ಓ ವ ವಿ ವು ವೆ ವೊ |
| ಮಿಥುನ | ಕ ಕಿ ಕು ಘ ಙ ಛ ಕೆ ಕೊ ಹ |
| ಕರ್ಕ | ಹಿ ಹು ಹೆ ಹೊ ಡ ಡಿ ಡು ಡೆ ಡೊ |
| ಸಿಂಹ | ಮ ಮಿ ಮು ಮೆ ಮೊ ಟ ಟಿ ಟು ಟೆ |
| ಕನ್ಯಾ | ಟೊ ಪ ಪಿ ಪು ಷ ಣ ಠ ಪೆ ಪೊ |
| ತುಲಾ | ರ ರಿ ರು ರೆ ರೊ ತ ತಿ ತು ತೆ |
| ವೃಶ್ಚಿಕ | ತೊ ನ ನಿ ನು ನೆ ನೊ ಯ ಯಿ ಯು |
| ಧನು | ಯೆ ಯೊ ಭ ಭಿ ಭು ಧ ಫ ಢ ಭೆ |
| ಮಕರ | ಭೊ ಜ ಜಿ ಜು ಜೆ ಜೊ ಖ ಖಿ ಖು ಖೆ ಖೊ ಗ ಗಿ |
| ಕುಂಭ | ಗು ಗೆ ಗೊ ಸ ಸಿ ಸು ಸೆ ಸೊ ದ |
| ಮೀನ | ದಿ ದು ಝ ಞ ಥ ದೆ ದೊ ಚ ಚಿ |

## ಯೋಗ್ಯಾಯೋಗ್ಯ ರುದ್ರಾಕ್ಷಿಗಳು

ಕ್ರಿಮಿದಷ್ಟಂ ವಿಭಿನ್ನಂಚ ಜೀರ್ಣಂ ಸೂಕ್ಷ್ಮ ಮಕಂಟಕಮ್ ।
ಅವೃತ್ತಂಯುಮಲಂ ವಕ್ರಮಷ್ಟಾ ವೇತಾನ್ವಿ ವರ್ಜಯೇತ್ ॥
ಅಭಿನ್ನಂ ನಿಕಷೇ ಹೈಮ ಮನನ್ಯಧೃತ ಮಾರುಣಮ್ ।
ನವ್ಯಂ ಪರಂಪರಾ ಪ್ರಾಪ್ತಂ ಧಾರ್ಯಂ ರುದ್ರಾಕ್ಷ ಮುತ್ತಮಮ್ ॥
ಕುಲೀನ ಮಕುಲೀನಂ ವಾ ಭೂತಿ ರುದ್ರಾಕ್ಷ ಧಾರಿಣಮ್ ।
ದೃಷ್ಟ್ವೋನ್ನತಾಸನೇ ಸ್ಥಿತ್ವಾರೌರವಂ ನರಕಂ ವ್ರಜೇತ್ ॥

ಹುಳು ಹತ್ತಿದ, ಮುಕ್ಕಾಗಿರುವ, ಒಡೆದ, ಹಳೆಯದಾಗಿರುವ ರಂಧ್ರವು ಅತ್ಯಂತ ಚಿಕ್ಕದಾಗಿರುವ, ದುಂಡಾಗಿರದ, ಅಡ್ಡತಿಡ್ಡಿ ಇರುವ, ಎರಡು ರುದ್ರಾಕ್ಷಿ ಹೊಂದಿಕೊಂಡಿರುವ, ಸೊಟ್ಟಾಗಿರುವ, ರುದ್ರಾಕ್ಷಿಗಳು ಅಯೋಗ್ಯವಾಗಿದ್ದು ಅವುಗಳನ್ನು ಧರಿಸಬಾರದು, ಭಿನ್ನವಾಗಿರದೆ ಇರುವ, ಕೆಂಪು ಬಣ್ಣದಿಂದ ಇರುವ, ಹೊಸದಾಗಿ ಇರುವ ಉತ್ತಮವಾಗಿರುವ ರುದ್ರಾಕ್ಷಿಗಳು ಯೋಗ್ಯವಾಗಿದ್ದು ಅವುಗಳನ್ನು ಉತ್ತಮ ಕುಲದಲ್ಲಿ ಹುಟ್ಟಿದವನಾಗಿರಲಿ, ಅಧಮ ಕುಲದಲ್ಲಿ ಹುಟ್ಟಿದವನಾಗಿರಲಿ ಧರಿಸಿಕೊಂಡರೆ ಆತನಿಗೆ ಸದ್ಗತಿಯುಂಟಾಗುವದು.

ಮುಗಿದುದು